KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೧೭, ೨೦೦೬ (ಶ್ರಾವಣ ೨೬, ಶಕವರ್ಷ ೧೯೨೮) | ಸಂಚಿಕೆ ೩೩ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಸತಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 02/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:18ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಪಿ. ಪನ್ನೀರ್ ಸೆಲ್ವಂ, ಬಿನ್ ಪರಿಮಾಳ್ ಗೌಂಡರ್ ಪೌದಿಯಮ್ಮ ದೇವಸ್ಥಾನದ ಹತ್ತಿರ, ಹಿರಿಯೂರು, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 2. | ಶ್ರೀಮತಿ ಹೆಚ್.ಕೆ. ಅಶ್ವಿನಿ ಕೋಂ ಸತ್ಯನಾರಾಯಣ ಮೂರ್ತಿ, ಅಶೋಕ ರಸ್ತೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 3. | ಶ್ರೀ ಸ್ವಾಮೀಜಿ ದಾಸ್ ಬಿನ್ ರಾಮಯ್ಯ, ಗೋಪಾಲಪುರ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 4. | ಶ್ರೀ ಕರೀಮ್ ಸಾಬ್ ಬಿನ್ ಸತ್ತಾರ್ ಸಾಬ್, ಚರ್ಚ್ ರಸ್ತೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1102

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಮೈಸೂರು ಜಿಲ್ಲೆ, ಮೈಸೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ಮೈಸೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 01/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ಮೈಸೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ರಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಚಿಕ್ಕಲಿಂಗಯ್ಯ, ನಂ.1550/ 3, 4ನೇ ಕ್ರಾಸ್, ರಾಮಯ್ಯ ರಸ್ತೆ, ಅಶೋಕಪುರಂ, ಮೈಸೂರು. | ಸದಸ್ಯರು |
| 2. | ಶ್ರೀಮತಿ ಗೌರಮ್ಮ, ಮನೆ ನಂ.886/ 10, 2ನೇ ಕ್ರಾಸ್ ಬೆಸ್ತರ ಬ್ಲಾಕ್, ಸೂಯಜ್ ಫಾರಂ ರಸ್ತೆ, ವಿದ್ಯಾರಣ್ಯಪುರಂ, ಮೈಸೂರು. | ಸದಸ್ಯರು |
| 3. | ಶ್ರೀ ಮೋಹಿನುದ್ದೀನ್ ಪಾಷ, ನಂ.2244, 5ನೇ ಕ್ರಾಸ್, ಬಸವೇಶ್ವರ ರಸ್ತೆ, ಕೆ.ಆರ್. ಮೊಹಲ್ಲಾ, ಮೈಸೂರು. | ಸದಸ್ಯರು |
| 4. | ಶ್ರೀ ಮೂರ್ತಿ, ನಂ.2676, 3ನೇ ಕ್ರಾಸ್, 2ನೇ ಮೈನ್, ಮೇದರಗೇರಿ, ಕೆ.ಆರ್. ಮೊಹಲ್ಲಾ, ಮೈಸೂರು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1103

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 21/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಉತ್ತರಕನ್ನಡ ಜಿಲ್ಲೆ, ಸಿದ್ದಾಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ವಸಂತ ಚೌಡಪ್ಪ ನಾಯ್ಕ, ಕೊಂಡ್ಲಿ, ಸಿದ್ದಾಪುರ ತಾಲ್ಲೂಕು, ಶಿರಸಿ ಜಿಲ್ಲೆ. | ಸದಸ್ಯರು |
| 2. | ಶ್ರೀಮತಿ ಉಮಾ ಉದಯ ನಾಯಕ, ಹಾಳದಕಟ್ಟಾ, ಸಿದ್ದಾಪುರ ತಾಲ್ಲೂಕು, ಶಿರಸಿ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಗೀತಾ ಗಣೇಶ ಚಲ್ವಾದಿ, ಕನಕದಾಸ ಗಲ್ಲಿ, ಸಿದ್ದಾಪುರ ತಾಲ್ಲೂಕು, ಶಿರಸಿ ಜಿಲ್ಲೆ. | ಸದಸ್ಯರು |
| 4. | ಶ್ರೀ ಮೈದೀನ ಮಹ್ಮದಸಾಬ್, ಕಾಳಿದಾಸ ಗಲ್ಲಿ, ಸಿದ್ದಾಪುರ ತಾಲ್ಲೂಕು, ಶಿರಸಿ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1104

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಬಾಗಲಕೋಟೆ ಜಿಲ್ಲೆ, ರಬಕವಿ-ಬನಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ, ರಬಕವಿ-ಬನಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 74/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ, ರಬಕವಿ-ಬನಹಟ್ಟಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಚನ್ನಬಸಪ್ಪ ಹೊಳೆಪ್ಪ ಅರಕೇರಿ, ಸಾ: ರಬಕವಿ, ಬಾಗಲಕೋಟೆ ಜಿಲ್ಲೆ | ಸದಸ್ಯರು |
| 2. | ಶ್ರೀ ಅರುಣ ಹೀರಾಚಂದ್ರ ಕಾಸಾರ, ಸಾ: ಬನಹಟ್ಟಿ, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಭಾರತಿ ಕಾಶೀನಾಥ ನೀಲಕಂಠಮಠ, ಸಾ: ರಾಂಪುರ, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 4. | ಶ್ರೀ ಶೈಲ ಶ್ರೀಮಂತಗಾಂಜೆ, ಬಾಗಲಕೋಟೆ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1105

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 62/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ನಾಗೇಂದ್ರಪ್ಪ, ತಂದೆ ಸಿದ್ದಪ್ಪ ಬುರುಲಿ, ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 2. | ಶ್ರೀಮತಿ ಸುನೀತಾ, ಗಂಡ ಶಂಕರಸಿಂಗ್ ಸಿರಂಜಿ, ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 3. | ಶ್ರೀ ಪ್ರಭಾಕರ್, ತಂದೆ ಕೃಷ್ಣಾಜಿ ತುರೆ, ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 4. | ಶ್ರೀ ತಾಹೇರ, ತಂದೆ ನಸಿರುದ್ದೀನ್ ಜುನೇದಿ, ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1106

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 59/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀಮತಿ ಕಸ್ತೂರಿಬಾಯಿ ಅಪ್ಪಾಶಾ ಬದಲಾದ್ ಅಫ್‌ಜಲ್‌ಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 2. | ಶ್ರೀ ಕಾಲೀದ್ ಅಫ್‌ಜಲ್ ಇನಾಮದಾರ್, ಅಫ್‌ಜಲ್‌ಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 3. | ಶ್ರೀ ತಿಮ್ಮಣ್ಣ ವಡ್ಡಾರ, ಅಫ್‌ಜಲ್‌ಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |
| 4. | ಶ್ರೀ ಶಿವಪುತ್ರಪ್ಪ ಬುರುಲಿ ಅಫ್‌ಜಲ್‌ಪುರ, ಅಫ್‌ಜಲ್‌ಪುರ, ಗುಲ್ಬರ್ಗಾ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1107

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಕೆ.ಎಸ್. ಪರಶುರಾಮರಾವ್, ಬಿನ್ ಕೆ.ಎನ್. ಶಿವಾಜಿರಾವ್, ಶಿವಾಜಿನಗರ, ಅರಸೀಕೆರೆ, ಹಾಸನ ಜಿಲ್ಲೆ. | ಸದಸ್ಯರು |
| 2. | ಶ್ರೀ ಎ.ಎಲ್. ನಾರಾಯಣ, ಬಿನ್ ಲಕ್ಷ್ಮೀನರಸಿಂಹಯ್ಯ, ಬಸ್ತಿಗುಡಿ ಹಿಂಭಾಗದ ರಸ್ತೆ, ಅರಸೀಕೆರೆ, ಹಾಸನ ಜಿಲ್ಲೆ. | ಸದಸ್ಯರು |
| 3. | ಶ್ರೀ ಮುರುಗೇಶ್ ಬಿನ್ ಪರುಮಾಳ್, 5ನೇ ಕ್ರಾಸ್, ಹಾಸನ ರಸ್ತೆ, ಅರಸೀಕೆರೆ ಪಟ್ಟಣ, ಹಾಸನ ಜಿಲ್ಲೆ. | ಸದಸ್ಯರು |
| 4. | ಶ್ರೀಮತಿ ಶಮಂತ ಕೋಂ ಬಾಬುರಾವ್, ಕರಿಯಮ್ಮ ದೇವಸ್ಥಾನ ರಸ್ತೆ, ಅರಸೀಕೆರೆ, ಹಾಸನ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1108

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಹಾವೇರಿ ಜಿಲ್ಲೆ, ಶಿಗ್ಗಾಂವ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾವೇರಿ ಜಿಲ್ಲೆ, ಶಿಗ್ಗಾಂವ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 38/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಹಾವೇರಿ ಜಿಲ್ಲೆ, ಶಿಗ್ಗಾಂವ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ವಿರುಪಾಕ್ಷಪ್ಪ ನೀರಲಗಿ, ತಂದೆ ಬಸವಣ್ಣೆಪ್ಪ, ಶಿಗ್ಗಾಂವ, ಹಾವೇರಿ ಜಿಲ್ಲೆ. | ಸದಸ್ಯರು |
| 2. | ಶ್ರೀ ರಾಮಣ್ಣ ಪೂಜಾರ, ತಂದೆ ಲಕ್ಷ್ಮಣ, ಶಿಗ್ಗಾಂವ, ಹಾವೇರಿ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಗೀತಾಬಾಯಿ ದೈವಜ್ಞ, ಕೋಂ ರಾಮಚಂದ್ರ, ಶಿಗ್ಗಾಂವ, ಹಾವೇರಿ ಜಿಲ್ಲೆ. | ಸದಸ್ಯರು |
| 4. | ಶ್ರೀ ಅಬ್ದುಲ್ ಕರೀಮ್ ಮೊಗಲಲ್ಲಿ, ತಂದೆ ಅಲ್ಲಾಭಕ್ಷ, ಶಿಗ್ಗಾಂವ, ಹಾವೇರಿ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1109

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಉತ್ತರ ಕನ್ನಡ ಜಿಲ್ಲೆ, ಶಿರಸಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಉತ್ತರ ಕನ್ನಡ ಜಿಲ್ಲೆ, ಶಿರಸಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 22/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಉತ್ತರಕನ್ನಡ ಜಿಲ್ಲೆ, ಶಿರಸಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಭಾಸ್ಕರ ದಾಮೋದರ ನಾಯ್ಕ, ಗಾಂಧಿನಗರ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| 2. | ಶ್ರೀ ಹರೀಶ ಅಚ್ಯುತ್ ಪಾಲೇಕರ, ನೆಹರೂ ನಗರ, ಶಿರಸಿ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಕಾವೇರಿ ದೇವಾಡಿಗ, ವೀರಭದ್ರ ಗಲ್ಲಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| 4. | ಶ್ರೀ ಡ್ಯಾನಿ ಡಿಸೋಜಾ, ಟಿ.ಎಸ್.ಎಸ್. ರಸ್ತೆ, ಶಿರಸಿ ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1110

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಬಾಗಲಕೋಟೆ ಜಿಲ್ಲೆ, ತೆರದಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ, ತೆರೆದಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 75/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ, ತೆರೆದಾಳ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಸತ್ತೆಪ್ಪ ಶ್ರೀಕಾಂತ ಚವಜ, ತೆರೆದಾಳ, ಬಾಗಲಕೋಟೆ ಜಿಲ್ಲೆ | ಸದಸ್ಯರು |
| 2. | ಶ್ರೀ ಸುಭಾಸ ಮಹಲಿಂಗಪ್ಪ ಚಂಚಲಿ, ತೆರದಾಳ, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 3. | ಶ್ರೀ ಮಲ್ಲಪ್ಪ ಭೀ ತುಭಜಿ, ತೆರದಾಳ, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 4. | ಶ್ರೀಮತಿ ಶಾಂತಾ ನಿಂಗಪ್ಪ ಮಾಂಗ, ತೆರದಾಳ, ಬಾಗಲಕೋಟೆ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1111

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗದಗ್ ಜಿಲ್ಲೆ, ರೋಣ ತಾಲ್ಲೂಕು, ಗಜೇಂದ್ರಗಡ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗದಗ್ ಜಿಲ್ಲೆ, ರೋಣ ತಾಲ್ಲೂಕು ಗಜೇಂದ್ರಗಡ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 92/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಗದಗ್ ಜಿಲ್ಲೆ, ರೋಣ ತಾಲ್ಲೂಕು, ಗಜೇಂದ್ರಗಡ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಷಣ್ಮುಕಪ್ಪ ಬುಡ್ಡಪ್ಪ ನಿಡಗುಂದಿ, ಸಾ: ಗಜೇಂದ್ರಗಡ, ರೋಣ ತಾಲ್ಲೂಕು, ಗದಗ್ ಜಿಲ್ಲೆ. | ಸದಸ್ಯರು |
| 2. | ಶ್ರೀ ತಿಮ್ಮಣ್ಣ ಫಕೀರಪ್ಪ ಪನ್ನಾಲ, ಸಾ: ಗಜೇಂದ್ರಗಡ, ರೋಣ ತಾಲ್ಲೂಕು, ಗದಗ್ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಮೆಹಬೂಬಿ ಮಾಬುಸಾಬ ತಟಗಾರ, ಸಾ: ಗಜೇಂದ್ರಗಡ, ರೋಣ ತಾಲ್ಲೂಕು, ಗದಗ್ ಜಿಲ್ಲೆ. | ಸದಸ್ಯರು |
| 4. | ಶ್ರೀ ಹನುಮಂತರಾವ್ ಕಳಕಪ್ಪ ಚವ್ಹಾಣ, ಸಾ: ಗಜೇಂದ್ರಗಡ, ರೋಣ ತಾಲ್ಲೂಕು, ಗದಗ್ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1112

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಹೆಜಮಾಡಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿ;30.4.2003.

2. ಧಾಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/ 9/2004-05 ದಿನಾಂಕ:12.7.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸಂಖ್ಯೆ:(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34, 245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಹೆಜಮಾಡಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನವು ಅಧಿಸೂಚಿತ ಸಂಸ್ಥೆಯಾಗಿದ್ದು, ಸದರಿ ದೇವಸ್ಥಾನವು ಉಡುಪಿ ಶ್ರೀ ಪುತ್ತಿಗೆ ಮಠಕ್ಕೆ ಸೇರಿದ ದೇವಸ್ಥಾನವಾಗಿರುವುದರಿಂದ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಲು ಜಿಲ್ಲಾಧಿಕಾರಿಗಳು ಹಾಗೂ ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 55 ಮುಅಬಿ 2005, ಬೆಂಗಳೂರು, ದಿನಾಂಕ:28ನೇ ಜೂನ್, 2006**

ಕರ್ನಾಟಕ ಹಿಂದು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(i) ರ ಪ್ರಕಾರ " ಒಂದು ಮಠಕ್ಕೆ ಅಥವಾ ಅದಕ್ಕೆ ಸೇರಿದ ಒಂದು" ದೇವಸ್ಥಾನಕ್ಕೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 77 ಮುಸೇವಿ 2003 ದಿನಾಂಕ:30.4.2003ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಹೆಜಮಾಡಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕ್ರಮ ಸಂಖ್ಯೆ:75, ಪುಟ ಸಂಖ್ಯೆ:712ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1114

ಪೀಠಾಧಿಕಾರಿ,

ಕಂದಾಯ ಇಲಾಖೆ, (ಮುಜರಾಯಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 143 ಎಸ್‌ಇಎನ್ 06, ಬೆಂಗಳೂರು, ದಿನಾಂಕ:25ನೇ ಜುಲೈ, 2006**

**ವಿಷಯ:** ಶ್ರೀ ಎಸ್. ಎನ್. ನಾಗರಾಜ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಎಸ್. ಎನ್. ನಾಗರಾಜ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 143 ಎಸ್‌ಇಎನ್ 06 ದಿ:25.4.06ರಲ್ಲಿ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಎಸ್. ಎನ್. ನಾಗರಾಜ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಸರ್ಕಾರವು ಶ್ರೀ ಎಸ್. ಎನ್. ನಾಗರಾಜ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತನ್ನು ತೆರವುಗೊಳಿಸಿ ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1115

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನೀಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಎಸ್‌ಇಎನ್ 2003, ದಿನಾಂಕ:29.06.2005.

2. ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರ ದಿನಾಂಕ:29.12.2005ರ ವಿಚಾರಣಾ ವರದಿ.

3. ಎರಡನೇ ಕಾರಣ ಕೇಳಿ ನೋಟೀಸ್ ಸಂಖ್ಯೆ: ಸಿಆಸುಇ 113 ಎಸ್‌ಇಎನ್ 03 ದಿನಾಂಕ:05.01.2006.

4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 48 ಸಿಎಸ್‌ಎಸ್ 06 ದಿನಾಂಕ:01.07.2006.

**ಪ್ರಸ್ತಾವನೆ:**

ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಅಧೀಕ್ಷಕ ಅಭಿಯಂತರರಾಗಿದ್ದಾಗ ಅವರ ಬಡ್ತಿ ವಿಷಯದಲ್ಲಿ ಶ್ರೀ ಎಸ್. ಸೆಲ್ವಕುಮಾರ್, ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು), ಬೆಂಗಳೂರು ಇವರಿಗೆ ಹಣದ ಆಮಿಷೆ ತೋರಿಸಿ ದುರ್ನಡತೆ ಎಸಗಿದರು ಎಂಬ ಆರೋಪಕ್ಕೆ ಸಂಬಂಧಿಸಿದಂತೆ ದಿನಾಂಕ:26.04.2005ರ ನೋಟೀಸು ಜಾರಿ ಮಾಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಉತ್ತರಿಸಿದ ಆರೋಪಿತರು ದೋಷಾರೋಪಣೆಯನ್ನು ನಿರಾಕರಿಸಿದ ಕಾರಣ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ವಿಚಾರಣಾ ವರದಿಯನ್ನು ದಿನಾಂಕ:29.12.2005ರಂದು ಸಲ್ಲಿಸಿ ಆಪಾದಿತರ ವಿರುದ್ಧ ಮಾಡಲಾದ ಆರೋಪವು ದೃಢಪಟ್ಟಿದೆಯೆಂದು ತಿಳಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಆಪಾದಿತರು ತಮ್ಮ ಬಡ್ತಿಯನ್ನು ಅನಾವಶ್ಯಕವಾಗಿ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ರವರು ವಿಳಂಬ ಮಾಡಿರುತ್ತಾರೆಂದು, ಅದರಿಂದ ತಪ್ಪಿಸಿಕೊಳ್ಳಲು ತಮಗೆ ಹಣದ ಆಮಿಷೆ ನೀಡಿದ್ದರೆಂಬ ಸುಳ್ಳು ಮಾಹಿತಿಯನ್ನು ವರದಿ ಮಾಡಿದ್ದಾರೆಂದು, ಅದಕ್ಕೆ ಯಾವುದೇ ಸಾಕ್ಷಿ ಪುರಾವೆಗಳು ಇಲ್ಲವೆಂಬ ಆರೋಪಿತರ ವಾದವನ್ನು ವಿಚಾರಣಾಧಿಕಾರಿಗಳು ತಳ್ಳಿ ಹಾಕಿದ್ದಾರೆ. 2ನೇ ಸಾಕ್ಷಿದಾರರಾದ ಉಪ ಕಾರ್ಯದರ್ಶಿರವರು ಅವರ ಬಡ್ತಿ ವಿಚಾರದಲ್ಲಿ ವಿಳಂಬ ಆಗಲು ಕಾರಣ ಎಂಬುದನ್ನು ವಿಚಾರಣಾಧಿಕಾರಿಗಳು ಒಪ್ಪದೆ ಆಪಾದಿತರ ವಾದವು ಸಮರ್ಥನೀಯವಲ್ಲವೆಂದು, ಈ ಬಗ್ಗೆ ಅವರು ಲಂಚ ನೀಡಲು ಪ್ರಯತ್ನಿಸಿದ ಘಟನೆಯನ್ನು ರುಜುವಾತುಪಡಿಸಲು ಭಾರತ ಸಾಕ್ಷ್ಯ ಅಧಿನಿಯಮಗಳ ಉಪಬಂದಗಳು ನೂರಕ್ಕೆ ನೂರರಷ್ಟು ಅನ್ವಯಿಸುವುದಿಲ್ಲವೆಂದು, ಸ್ವಾಭಾವಿಕ ನ್ಯಾಯ ತತ್ವಗಳ ಹಿನ್ನೆಲೆಯಲ್ಲಿ ಹಾಜರುಪಡಿಸಿದ ಸಾಕ್ಷ್ಯದ ಮೌಲ್ಯ ಮಾಪನದ ಆಧಾರದಲ್ಲಿ ಆರೋಪ ರುಜುವಾತಾಗಿದೆ ಎಂಬ ನಿರ್ಣಯ ನೀಡಿರುತ್ತಾರೆ.

ಆಪಾದಿತರಿಗೆ ವರದಿಯ ಪ್ರತಿಯನ್ನು ಒದಗಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ:05.01.2006ರ 2ನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು. ಇದಕ್ಕೆ ಉತ್ತರಿಸುತ್ತಾ, ಆಪಾದಿತರು ತಾನು ಹಣ ನೀಡಲು ಪ್ರಯತ್ನಿಸಿದ್ದಕ್ಕೆ ಸಾಕ್ಷ್ಯಾಧಾರ ಇಲ್ಲವೆಂದು ಮತ್ತು ಹಾಗಿದ್ದಲ್ಲಿ ಸದರಿ ಹಣವನ್ನು ವಶಪಡಿಸಿಕೊಳ್ಳಬಹುದಾಗಿತ್ತೆಂದು ತಿಳಿಸಿರುತ್ತಾರೆ. ಈ ವಾದವನ್ನು ವಿಚಾರಣಾಧಿಕಾರಿಗಳು ಪರಿಗಣಿಸಿರುತ್ತಾರೆ. ಇವರ ಹೇಳಿಕೆಯಲ್ಲಿ ಯಾವುದೇ ಹೊಸ ಆಧಾರಗಳಿಲ್ಲ. ಇವರು ಮುಖ್ಯ ಅಭಿಯಂತರರಾಗಿ ಬಡ್ತಿ ಹೊಂದುವ ಲೋಕೋಪಯೋಗಿ ಇಲಾಖೆಯಲ್ಲಿಯೂ ಸಹ ಶಿಸ್ತಿನ ಪ್ರಕರಣ ಬಾಕಿ ಇತ್ತು. ಹಲವಾರು ವರ್ಷದಿಂದ ಇವರ ವಿರುದ್ಧದ ಶಿಸ್ತಿನ ಪ್ರಕರಣ ಬಾಕಿ ಇದ್ದು, ಆ ಸಂಬಂಧ ನೀರಾವರಿ ಇಲಾಖೆಯು ದಿನಾಂಕ:03.07.2003ರಂದು ವಿಚಾರಣೆಯನ್ನು ಕೈಬಿಡಲಾಗಿದೆಯೆಂದು ಸಿಆಸು ಇಲಾಖೆಗೆ ತಿಳಿಸಿತ್ತು ಎಂದು ಆರೋಪಿತರೇ ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ಇವರ ಜ್ಯೇಷ್ಠತೆಯನ್ನು ಕಡೆಗಣಿಸಿ ಇತರರಿಗೆ ಬಡ್ತಿ ನೀಡಿರುವುದರಲ್ಲಿ ಸಿಆಸು ಇಲಾಖೆಯ ಅಥವಾ ಅಧಿಕಾರಿಗಳ ಲೋಪ ಏನೂ ಕಂಡು ಬರುತ್ತಿಲ್ಲ. ವಿಚಾರಣಾ ವರದಿಯ ಬಗ್ಗೆ ಅಂತಿಮ ನಿಲುವನ್ನು ಆಡಳಿತ ಇಲಾಖೆಯಲ್ಲಿ ತೆಗೆದುಕೊಳ್ಳಲು ವಿಳಂಬವಾಗಿದ್ದು, ಆ ವಿಳಂಬದ ಬಗ್ಗೆ ಫಿರ್ಯಾದುದಾರರಾದ ಶ್ರೀ ಸೆಲ್ವಕುಮಾರ್‌ರವರು ಹೆದರುವ ಪರಿಸ್ಥಿತಿ ಇರಲಿಲ್ಲ. ಆದ್ದರಿಂದ ಆಪಾದಿತರ ಹೇಳಿಕೆಯಲ್ಲಿ ಯಾವುದೇ ಸಮರ್ಥನೀಯ ಮತ್ತು ನ್ಯಾಯಯುತವಾದ ಅಂಶಗಳು ಇಲ್ಲದಿರುವುದರಿಂದ ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿಕೊಂಡು ಇವರು ಎಸಗಿದ ದುರ್ನಡತೆಯ ಸ್ವರೂಪವನ್ನು ಗಮನದಲ್ಲಿರಿಸಿ ಇವರ ಮಾಸಿಕ ನಿವೃತ್ತಿ ವೇತನದಿಂದ ಪ್ರತಿ ತಿಂಗಳು ರೂ.500ನ್ನು ಒಂದು ವರ್ಷದ ಅವಧಿಯವರೆಗೆ ಕಡಿತಗೊಳಿಸಲು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಿದ್ದರ ಮೇರೆಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ:01.07.2006ರ ಪತ್ರದಲ್ಲಿ ಲೋಕಸೇವಾ ಆಯೋಗವು ತನ್ನ ಸಹಮತಿ ತಿಳಿಸಿರುತ್ತದೆ. ಆದ್ದರಿಂದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಎಸ್‌ಇಎನ್ 2003, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ಮಾಸಿಕ ನಿವೃತ್ತಿ ವೇತನದಿಂದ ಮಾಹೆಯಾನ ರೂ.500/-ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

ಪಿ.ಆರ್. 1116

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಬಾಪು ಸೈಂಟಿಫಿಕ್ ಅಂಡ್ ಎಜುಕೇಷನಲ್ ಅಸೋಶಿಯೇಷನ್‌ನ ಬಾಪು ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:21.12.2005, ಸಂಖ್ಯೆ:F.SRO/NCTE/B.Ed/2005-06/4802ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

2. ದಿನಾಂಕ:20.05.2006 ಕಾರ್ಯದರ್ಶಿ, ಬಾಪು ಸೈಂಟಿಫಿಕ್ ಅಂಡ್ ಎಜುಕೇಷನಲ್ ಅಸೋಶಿಯೇಷನ್, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ದಿನಾಂಕ:21.12.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (2)ರಲ್ಲಿರುವ ಪತ್ರದಲ್ಲಿ **ಕಾರ್ಯದರ್ಶಿ, ಬಾಪು ಸೈಂಟಿಫಿಕ್ ಅಂಡ್ ಎಜುಕೇಷನಲ್ ಅಸೋಶಿಯೇಷನ್, ಬೆಂಗಳೂರು** ಇವರು ತಮ್ಮ ಸಂಸ್ಥೆಯ **ಬಾಪು ಕಾಲೇಜು ಆಫ್ ಎಜುಕೇಷನ್‌ಗೆ** ಎಸ್.ಆರ್.ಸಿ. -ಎನ್‌ಸಿಟಿಇಯು 2005-06ನೇ ಸಾಲಿನಿಂದ ಅನುಮೋದನೆಯನ್ನು ನೀಡಿದ್ದು, ಅದರಂತೆ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಸಂಯೋಜನೆಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 30 ಯುಬಿವಿ 2006, ಬೆಂಗಳೂರು, ದಿನಾಂಕ:3ನೇ ಜುಲೈ, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಬಾಪು ಸೈಂಟಿಫಿಕ್ ಅಂಡ್ ಎಜುಕೇಷನಲ್ ಅಸೋಶಿಯೇಷನ್‌ನ ಬಾಪು ಕಾಲೇಜ್ ಆಫ್ ಎಜುಕೇಷನ್, ಯಶವಂತಪುರ, ಬೆಂಗಳೂರು-560 022 ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1117

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಆರ್ಥಿಕ ಸಚಿವಾಲಯ

## ಅಧಿಕೃತ ಜ್ಞಾಪನ

### ಸಂಖ್ಯೆ: ಆಇ 1 ಸೇನಿಸೇ 06, ಬೆಂಗಳೂರು, ದಿನಾಂಕ:12ನೇ ಜುಲೈ, 2006

**ವಿಷಯ:** ಮಧ್ಯಂತರ ಪರಿಹಾರ ಮತ್ತು ವಿಶೇಷ ಭತ್ಯೆಯನ್ನು ಗಳಿಕೆ ರಜೆ ನಗದೀಕರಣಕ್ಕಾಗಿ ಪರಿಗಣಿಸುವ ಬಗ್ಗೆ ಸ್ಪಷ್ಟೀಕರಣ.

**ಉಲ್ಲೇಖ:** 1. ದಿನಾಂಕ:29.03.2006ರ ಎಫ್‌ಡಿ 8 ಎಸ್‌ಆರ್‌ಪಿ 06ನೇ ಕ್ರಮಾಂಕದ ಆದೇಶ.
2. ದಿನಾಂಕ:12.05.2006ರ ಎಫ್‌ಡಿ 14 ಎಸ್‌ಆರ್‌ಪಿ 06ನೇ ಕ್ರಮಾಂಕದ ಆದೇಶ.

ಮೇಲ್ಕಂಡ (1)ರ ಆದೇಶದಲ್ಲಿ ರಾಜ್ಯ ಸರ್ಕಾರದ ನೌಕರರಿಗೆ ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಶೇ. 10ರಷ್ಟು ಮಧ್ಯಂತರ ಪರಿಹಾರವನ್ನು ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಾಸಿಕ ರೂ.200/- ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ. ಉಲ್ಲೇಖಿತ (3)ರ ಆದೇಶದಲ್ಲಿ ಪ್ರೌಢ ಶಾಲಾ ಶಿಕ್ಷಕರಿಗೆ ಮತ್ತು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಮಾಸಿಕ ರೂ.200ನ್ನು ವಿಶೇಷ ಭತ್ಯೆಯನ್ನು ದಿನಾಂಕ:01.04.2006ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ.

ಮೇಲ್ಕಂಡ (1) ಮತ್ತು (2)ರ ಆದೇಶಗಳಲ್ಲಿ ಮಂಜೂರು ಮಾಡಿರುವ ಮಧ್ಯಂತರ ಪರಿಹಾರವನ್ನು ಮತ್ತು ವಿಶೇಷ ಭತ್ಯೆಯನ್ನು:

1. ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಕ.ನಾ.ಸೇ.ನಿ. ನಿಯಮ 118 ರನ್ವಯ ನೀಡುವ ಗಳಿಕೆ ರಜೆ ನಗದೀಕರಣಕ್ಕಾಗಿ,
2. ಕ.ನಾ.ಸೇ.ನಿ. ನಿಯಮ 118ಎ ರನ್ವಯ ನಿವೃತ್ತಿ ಹೊಂದುತ್ತಿರುವ ಸರ್ಕಾರಿ ನೌಕರರು ಅವರ ಹಕ್ಕಿನಲ್ಲಿರುವ ಗಳಿಕೆ ರಜೆ ನಗದೀಕರಣಕ್ಕಾಗಿ, ಪರಿಗಣಿಸಬಹುದೇ ಎಂಬ ಬಗ್ಗೆ ಸ್ಪಷ್ಟೀಕರಣ ಕೋರಲಾಗಿದೆ.

ಈ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಸ್ಪಷ್ಟೀಕರಣವನ್ನು ನೀಡಲಾಗಿದೆ.

(1) ಮಧ್ಯಂತರ ಪರಿಹಾರವನ್ನು ಮತ್ತು ವಿಶೇಷ ಭತ್ಯೆಯನ್ನು ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಕ.ನಾ.ಸೇ.ನಿ. ನಿಯಮ 118 ರನ್ವಯ ನೀಡುವ ಗಳಿಕೆ ರಜೆ ನಗದೀಕರಣಕ್ಕಾಗಿ ಪರಿಗಣಿಸಬಹುದು.

(2) ಆದರೆ, ನಿವೃತ್ತಿ ಹೊಂದುತ್ತಿರುವ ಸರ್ಕಾರಿ ನೌಕರರಿಗೆ ಕ.ನಾ.ಸೆ.ನಿ. ನಿಯಮ 118ಎ ರನ್ವಯ ಅವರ ಹಕ್ಕಿನಲ್ಲಿರುವ ಗಳಿಕೆ ನಗದೀಕರಣದ ಸೌಲಭ್ಯಕ್ಕಾಗಿ ಮಧ್ಯಂತರ ಪರಿಹಾರವನ್ನು ಮತ್ತು ವಿಶೇಷ ಭತ್ಯೆಯನ್ನು ಲೆಕ್ಕಹಾಕುವಂತಿಲ್ಲ.

(3) ಅಸಾಧಾರಣ ರಜೆ ಅಥವಾ ವೇತನರಹಿತ ರಜೆಯನ್ನು ಹೊರತುಪಡಿಸಿ, ರಜೆಯ ಸಂದರ್ಭದಲ್ಲಿಯೂ ಮಧ್ಯಂತರ ಪರಿಹಾರ ಮತ್ತು ವಿಶೇಷ ಭತ್ಯೆಯು ಲಭ್ಯವಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**

ಪಿ.ಆರ್. 1118

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-1).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

## ಅಧಿಕೃತ ಜ್ಞಾಪನ

### ಸಂಖ್ಯೆ: ಪಸಂಮೀ 48: ಮೀಇಸೇ 2005, ಬೆಂಗಳೂರು, ದಿನಾಂಕ:21ನೇ ಜುಲೈ, 2006

**ವಿಷಯ:** ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇಣಿ-1) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:31.03.2004ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಗಳು 1957ರ ನಿಯಮ 10(1)ರ ಪ್ರಕಾರ ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ದಿನಾಂಕ:31.03.2004ರಲ್ಲಿದ್ದಂತೆ (ದಿನಾಂಕ:01.11.1956 ರಿಂದ 31.03.2004 ರವರೆಗಿನ) ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಇದೇ ಸಮಸಂಖ್ಯೆಯ ದಿನಾಂಕ:03.03.2006ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಪಡಿಸಿ ಈ ಬಗ್ಗೆ

ಬಾಧಿತರಾದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದ್ದು, ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಸೂಕ್ತ ದಾಖಲೆಗಳೊಂದಿಗೆ ಹಾಗೂ ಈ ಮಾಹಿತಿಯೊಂದಿಗೆ ಆಕ್ಷೇಪಣೆಗಳನ್ನು ಸಲ್ಲಿಸುವಂತೆ ಸಂಬಂಧಪಟ್ಟವರಿಗೆ ಸೂಚಿಸಲಾಗಿತ್ತು.

ಅದರಂತೆಯೆ, ಜೇಷ್ಠತಾ ಕ್ರಮಸಂಖ್ಯೆ 166ರಲ್ಲಿರುವ ಶ್ರೀ ಪಿ.ಟಿ. ಲಕ್ಷ್ಮಣರೆಡ್ಡಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ರವರು ಸಲ್ಲಿಸಿರುವ ಆಕ್ಷೇಪಣೆಯಲ್ಲಿ ತಮ್ಮ ಜನ್ಮ ದಿನಾಂಕವು ದಿನಾಂಕ:26.09.1953 ಆಗಿದ್ದು, ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತಮ್ಮ ಜನ್ಮ ದಿನಾಂಕವನ್ನು ದಿನಾಂಕ:26.09.1959 ಎಂದು ತಪ್ಪಾಗಿ ನಮೂದಿಸಲಾಗಿರುವುದನ್ನು ಸರಿಪಡಿಸುವಂತೆ ಕೋರಿದ್ದು, ಅದರಂತೆಯೆ ಅದರ ಜನ್ಮ ದಿನಾಂಕವನ್ನು ದಿನಾಂಕ:26.09.1953 ಎಂದು ಸರಿಪಡಿಸಲಾಗಿದೆ.

ಮುಂದುವರೆದು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿಯಲ್ಲಿನ (1) ಜೇಷ್ಠತಾ ಕ್ರಮಸಂಖ್ಯೆ 140ರಲ್ಲಿರುವ ಶ್ರೀ ಎ.ಎನ್. ಕುಮಾರ್, (2) ಜೇಷ್ಠತಾ ಕ್ರಮಸಂಖ್ಯೆ 142 ರಲ್ಲಿರುವ ಶ್ರೀ ವಿ.ಎಸ್. ಬುರ್ಲಿ, (3) ಜೇಷ್ಠತಾ ಕ್ರಮಸಂಖ್ಯೆ 143ರಲ್ಲಿರುವ ಶ್ರೀ ಕೆ. ಕೃಷ್ಣರಾಜ ಪುರಾಣಿಕ, (4) ಜೇಷ್ಠತಾ ಕ್ರಮಸಂಖ್ಯೆ: 144ರಲ್ಲಿರುವ ಶ್ರೀ ಜಿ.ಭದ್ರಸ್ವಾಮಿ ಹಾಗೂ (5) ಜೇಷ್ಠತಾ ಕ್ರಮಸಂಖ್ಯೆ 145ರಲ್ಲಿರುವ ಶ್ರೀ ಹೆಚ್.ಎನ್. ನರಸಿಂಹಮೂರ್ತಿ ಇವರು ಆಕ್ಷೇಪಣೆಗಳನ್ನು ಸಲ್ಲಿಸಿದ್ದು, ಅವರ ಆಕ್ಷೇಪಣೆಗಳಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ 137(ಎ)ರಲ್ಲಿ ನಮೂದಿಸಿರುವ ಶ್ರೀ ಡಿ.ತಿಪ್ಪೇಸ್ವಾಮಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 137(ಎ) ಎಂದು ನಿಗದಿಪಡಿಸಿರುವುದು ಸರಿಯಲ್ಲವೆಂದು, ಇದರಿಂದಾಗಿ ತಮಗೆ ಅನ್ಯಾಯವಾಗಿದ್ದು, ಶ್ರೀ ಡಿ.ತಿಪ್ಪೇಸ್ವಾಮಿರವರಿಗೆ ನೀಡಿರುವ ಜೇಷ್ಠತೆಯನ್ನು ರದ್ದುಪಡಿಸಿ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ/ 713/ ಎಸ್‌ಎಡಿ/ 93 ದಿನಾಂಕ:11.03.2002ರನ್ವಯ ಶ್ರೀ ಡಿ. ತಿಪ್ಪೇಸ್ವಾಮಿರವರಿಗೆ ದಿನಾಂಕ:11.03.2002ರಿಂದ ಅನ್ವಯವಾಗುವಂತೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹುದ್ದೆಗೆ ಅರ್ಹತಾ ದಿನಾಂಕವನ್ನು ನಿಗದಿಪಡಿಸುವಂತೆಯೂ ಹಾಗೂ ಅವರ ಜೇಷ್ಠತೆಯನ್ನು ಕ್ರಮಸಂಖ್ಯೆ 151(ಎ) ರಲ್ಲಿ ನಿಗದಿಗೊಳಿಸಿ ತಮಗೆ ನ್ಯಾಯ ದೊರಕಿಸುವಂತೆ ಕೋರಿರುತ್ತಾರೆ. ಸದರಿ ಅಧಿಕಾರಿಗಳು ಸಲ್ಲಿಸಿರುವ ಆಕ್ಷೇಪಣೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಹಿಂದೆ 1995ನೇ ಸಾಲಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ವೃಂದದ ಅಧಿಕಾರಿಗಳಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಹುದ್ದೆಗಳಿಗೆ ಬಡ್ತಿ ನೀಡುವಾಗ, 1979ನೆ ರೋಸ್ಟರ್‌ನಂತೆ 3ನೇ ಸೈಕಲ್‌ನ 2ನೇ ಪರಿಶಿಷ್ಟ ಪಂಗಡ ಬ್ಯಾಕ್‌ಲಾಗ್ ಬಿಂದುವಿಗೆ ಶ್ರೀ ಎಲ್.ಸಿದ್ದಪ್ಪ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಇವರ ಹೆಸರನ್ನು ಪ್ರಸ್ತಾಪಿಸಲಾಗಿ, ಇವರ ವಿರುದ್ಧ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ ಕೆಲಸಕ್ಕೆ ಸೇರಿರುವ ಬಗ್ಗೆ ದೂರು ಇದ್ದುದರಿಂದ, ಅವರ ಬಡ್ತಿಯನ್ನು ತಡೆಹಿಡಿದು ನಂತರ ಅವರ ವಿರುದ್ಧ ಜಾತಿಯ ಬಗ್ಗೆ ನಡೆದ ವಿಚಾರಣೆಯ ಪ್ರಕರಣವು ಇತ್ಯರ್ಥವಾಗುವವರೆಗೆ ಬ್ಯಾಕ್‌ಲಾಗ್ ಹುದ್ದೆಯನ್ನು ಮುಂದುವರೆಸಿಕೊಂಡು ಬಂದಲ್ಲಿ ಇನ್ನೊಬ್ಬ ಪರಿಶಿಷ್ಟ ಪಂಗಡದ ಅರ್ಹ ಅಧಿಕಾರಿಗೆ ಬಡ್ತಿ ನೀಡುವಲ್ಲಿ ಅನಗತ್ಯ ವಿಳಂಬವಾಗುತ್ತದೆಯೆಂಬ ಅಂಶವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಜೇಷ್ಠತೆಯಲ್ಲಿ ಶ್ರೀ ಎಲ್. ಸಿದ್ದಪ್ಪರವರ ನಂತರದ ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯಾದ ಶ್ರೀ ಡಿ.ತಿಪ್ಪೇಸ್ವಾಮಿ ಇವರಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಹುದ್ದೆಯಿಂದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹುದ್ದೆಗೆ ಸರ್ಕಾರಿ ಅಧಿಸೂಚನೆ ಸಂಖ್ಯೆ: ಪಸಂಮೀ/ 67/ ಮೀಇಸೇ/ 2001 ದಿನಾಂಕ:04.09.2001ರಲ್ಲಿ ಬಡ್ತಿ ನೀಡಲಾಗಿದೆ. ಶ್ರೀ ಎಲ್.ಸಿದ್ದಪ್ಪ ಇವರು ಪರಿಶಿಷ್ಟ ಪಂಗಡಕ್ಕೆ (ಎಸ್.ಟಿ.) ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ನೀಡಿ ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಹುದ್ದೆಗೆ ಆಯ್ಕೆಯಾಗಿ ನೇಮಕಗೊಂಡಿದ್ದರೆಂಬ ದೂರಿನ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಮಟ್ಟದ ಜಾತಿ ಪರಿಶೀಲನಾ ಸಮಿತಿ, ಬೆಂಗಳೂರು, ಇವರಿಂದ ವಿಚಾರಣೆ ನಡೆದು ದಿನಾಂಕ:25.10.2002ರ ಆದೇಶದಲ್ಲಿ ಶ್ರೀ ಎಲ್. ಸಿದ್ದಪ್ಪರವರು ಈ ಹಿಂದೆ ಬೆಂಗಳೂರು ಉತ್ತರ ತಾಲ್ಲೂಕು ತಹಶೀಲ್ದಾರರಿಂದ ದಿನಾಂಕ:30.11.1979ರಲ್ಲಿ "ಕಾಡು ಕುರುಬ" ಎಂಬ "ಪರಿಶಿಷ್ಟ ವರ್ಗಕ್ಕೆ" ಸೇರಿದವರೆಂದು ಪಡೆದಿದ್ದ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ:713:ಎಸ್‌ಎಡಿ: 93 ದಿನಾಂಕ:11.03.2002ರಂತೆ ಕ್ರಮಕೈಗೊಳ್ಳಲು ಆದೇಶಿಸಲಾಗಿದೆ. ಅದರಂತೆಯೆ, ಈ ಪ್ರಕರಣವನ್ನು ಪರಿಶೀಲಿಸಿ ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಪಸಂಮೀ:141: ಮೀಇಸೇ: 2003 ದಿನಾಂಕ:28.05.2005ರಲ್ಲಿ ಶ್ರೀ ಎಲ್.ಸಿದ್ದಪ್ಪರವರ ನಂತರದ ಪರಿಶಿಷ್ಟ ಪಂಗಡಕ್ಕೆ ಸೇರಿದ ಅರ್ಹ ಅಧಿಕಾರಿಯಾದ ಶ್ರೀ ಡಿ.ತಿಪ್ಪೇಸ್ವಾಮಿ, ಇವರಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದಲ್ಲಿ ನೇಮಕಾತಿಗೆ/ ಜೇಷ್ಠತೆಗೆ ಅರ್ಹತಾ ದಿನಾಂಕವನ್ನು ದಿನಾಂಕ:30.05.1995 ಎಂಬುದಾಗಿ ಮತ್ತು ನೈಜ ಮುಂಬಡ್ತಿ ಹೊಂದಿದ ದಿನಾಂಕವನ್ನು ದಿನಾಂಕ:04.09.2001 ಎಂಬುದಾಗಿ ಹಾಗೂ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ:137(ಎ) ಎಂಬುದಾಗಿ ನಿಗದಿಪಡಿಸಿ ಆದೇಶಿಸಲಾಗಿದೆ. ಒಂದುವೇಳೆ, ಶ್ರೀ ಎಲ್. ಸಿದ್ದಪ್ಪ ಇವರ ಸ್ಥಾನದಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಒಬ್ಬ ನೈಜ ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಯು ಆಯ್ಕೆಯಾಗಿ ನೇಮಕಗೊಂಡಿದ್ದಲ್ಲಿ, ಸೇವಾ ಅವಧಿಯಲ್ಲಿ ಅವರಿಗೆ ನಿಯಮಬದ್ಧವಾಗಿ ಹಾಗೂ ಕಾನೂನುಬದ್ಧವಾಗಿ ದೊರಕಬೇಕಾದ ಎಲ್ಲಾ ಸೌಲಭ್ಯಗಳನ್ನು ನೀಡಬೇಕಾಗುತ್ತಿದ್ದುದರಿಂದ, ಸದರಿ ಸೌಲಭ್ಯಗಳನ್ನು ಈ ಸ್ಥಾನಕ್ಕೆ ಬ್ಯಾಕ್‌ಲಾಗ್‌ನಲ್ಲಿ ಪರಿಶಿಷ್ಟ ಪಂಗಡದ ಕೋಟಾದಲ್ಲಿ ಪರಿಗಣಿಸಿ ಶ್ರೀ ಎಲ್.ಸಿದ್ದಪ್ಪ ನಂತರದ ಪರಿಶಿಷ್ಟ ಪಂಗಡಕ್ಕೆ ಸೇರಿದ ಅರ್ಹ ಅಧಿಕಾರಿಯಾದ ಶ್ರೀ ಡಿ.ತಿಪ್ಪೇಸ್ವಾಮಿಯವರಿಗೆ ನೀಡಲಾಗಿದೆ. ಆದುದರಿಂದ, ಮೇಲೆ ಹೇಳಿರುವ 05 ಜನ ಅಧಿಕಾರಿಗಳು ಸಲ್ಲಿಸಿರುವ ಆಕ್ಷೇಪಣೆಗಳನ್ನು ಗಣನೆಗೆ ತೆಗೆದುಕೊಳ್ಳದೆ/ ತಳ್ಳಿಹಾಕಿ ಈಗಾಗಲೇ ಶ್ರೀ ಡಿ.ತಿಪ್ಪೇಸ್ವಾಮಿಯವರಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದಲ್ಲಿ ನೀಡಲಾಗಿರುವ ಜೇಷ್ಠತಾ ಕ್ರಮಸಂಖ್ಯೆ:137(ಎ) ಎಂದು ಮತ್ತು ಅರ್ಹತಾ ದಿನಾಂಕವನ್ನು ದಿನಾಂಕ:30.05.1995 ಎಂಬುದಾಗಿ ಹಾಗೂ ನೈಜ ಮುಂಬಡ್ತಿ ಹೊಂದಿದ ದಿನಾಂಕವನ್ನು ದಿನಾಂಕ:04.09.2001 ಎಂಬುದಾಗಿ ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ದಿನಾಂಕ:03.03.2006ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಿರುವ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಕ್ರಮಸಂಖ್ಯೆ:119ರಲ್ಲಿರುವ ಶ್ರೀ ಪಿ. ನಾಗರಾಜು, ಇವರು ಸಲ್ಲಿಸಿರುವ ಆಕ್ಷೇಪಣೆಯಲ್ಲಿ ಅವರ ಹೆಸರಿನ ಮುಂದೆ (ಮೀಸಲಾತಿ ವರ್ಗದ ಕಾಲಂನಲ್ಲಿ) ತಪ್ಪಾಗಿ "ಎಸ್.ಸಿ." ಎಂದು ನಮೂದಿಸಿರುವುದನ್ನು "ಎಸ್.ಟಿ." ಎಂದು ನಮೂದಿಸಿ ಸರಿಪಡಿಸಲು ಕೋರಿದ್ದು, ಅದರಂತೆಯೇ ಸದರಿ ಅಧಿಕಾರಿಯವರ ಹೆಸರಿನ ಮುಂದೆ ಮೀಸಲಾತಿ ವರ್ಗದ ಕಾಲಂನಲ್ಲಿ "ಎಸ್.ಟಿ." ಎಂದು ಸರಿಪಡಿಸಲಾಗಿದೆ.

ತದನಂತರ ಸರ್ಕಾರದ ಅಧಿಸೂಚನೆ ಸಂಖ್ಯೆ:ಪಸಂಮೀ:200:ಮೀಇಸೇ:2005(1) ದಿನಾಂಕ:18.05.2006ರಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ವೃಂದದ ಅಧಿಕಾರಿಗಳಾದ ಶ್ರೀ ಎಂ.ಆದೆಪ್ಪ ಮತ್ತು ಶ್ರೀ ವೆಂಕಟೇಶ್ ಇವರಿಗೆ ಅವರಿಗಿಂತ ಕಿರಿಯ ಅಧಿಕಾರಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹುದ್ದೆಗೆ ಬಡ್ತಿ ನೀಡಿದ ದಿನಾಂಕ:03.08.2002ರಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ವೃಂದದಿಂದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದಕ್ಕೆ ಸ್ಥಾನಪನ್ನ ಬಡ್ತಿ

ನೀಡಲಾಗಿರುವುದರಿಂದ, ಅವರಿಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಜೇಷ್ಠತಾ ಪಟ್ಟಿಯಲ್ಲಿ ಅನುಕ್ರಮವಾಗಿ ಕ್ರಮಸಂಖ್ಯೆ 154(ಎ) ಮತ್ತು ಕ್ರಮಸಂಖ್ಯೆ 154(ಬಿ) ರಲ್ಲಿ ಜೇಷ್ಠತೆಯಲ್ಲಿ ನಿಗದಿಪಡಿಸಿ ನೈಜವಾಗಿ ಬಡ್ತಿ ಹೊಂದಿದ ದಿನಾಂಕವನ್ನು ಮತ್ತು ಜೇಷ್ಠತೆಗೆ ನೈಜವಾದ ದಿನಾಂಕವನ್ನು ದಿನಾಂಕ:03.08.2002 ಎಂದು ನಿಗದಿಪಡಿಸಲು ತೀರ್ಮಾನಿಸಲಾಗಿದೆ.

ಅಲ್ಲದೆ, ಸದರಿ ದಿನಾಂಕ:18.05.2006ರ ಅಧಿಸೂಚನೆಯಲ್ಲಿ ಶ್ರೀ ಎಲ್.ಜೆ. ಪೂಜಾರಿ ಇವರಿಗೆ ದಿನಾಂಕ:18.10.2004 ರಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹುದ್ದೆಗೆ ಸ್ಥಾನಪನ್ನ ಬಡ್ತಿಯನ್ನು ನೀಡಿದ್ದು, ಈಗ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದಕ್ಕೆ ಸೇರಿದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:31.03.2004ರಂದು ಇರುವಂತೆ ಪ್ರಕಟಿಸಲಾಗುತ್ತಿರುವುದರಿಂದ, ದಿನಾಂಕ:18.10.2004ರಿಂದ ಅನ್ವಯಿಸುವಂತೆ ಬಡ್ತಿ ಪಡೆದಿರುವ ಇವರ ಹೆಸರನ್ನು ಈ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸೇರಿಸಲಾಗಿಲ್ಲ.

ಮೇಲೆ ವಿವರಿಸಿರುವ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ಸ್ವೀಕರಿಸಲಾಗಿರುವ ಎಲ್ಲಾ ಆಕ್ಷೇಪಣೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 10(1) ರಂತೆ ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:31.03.2004ರಲ್ಲಿದ್ದಂತೆ ಈ ಅಧಿಕೃತ ಜ್ಞಾಪನದ **ಅನುಬಂಧದಲ್ಲಿ** ಇರುವಂತೆ ಪ್ರಕಟಿಸಲಾಗಿದೆ.

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಅನುಬಂಧ-1

## ದಿನಾಂಕ:31.03.2004ರಲ್ಲಿದ್ದಂತೆ ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ1) ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿ ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರ

| ಕ್ರ. ಸಂ. | ಬ್ಲಾಕ್ | ಬ್ಲಾಕ್ ಅವಧಿಯಲ್ಲಿ ಉದ್ಭವವಾದ ರಿಕ್ತ ಸ್ಥಾನಗಳು | ವೃಂದ ಮತ್ತು ನೇಮಕಾತಿಯ ನಿಯಮಗಳಲ್ಲಿ ನಿಗದಿಪಡಿಸಲಾದ ಕೋಟಾ | ಕೋಟ ಪ್ರಕಾರ ಲಭ್ಯವಾಗುವ ರಿಕ್ತ ಸ್ಥಾನಗಳು | | ವಾಸ್ತವವಾಗಿ ಭರ್ತಿ ಮಾಡಲಾದ ರಿಕ್ತ ಸ್ಥಾನಗಳು | | ಕೋಟಾ ಮಿತಿಯಲ್ಲಿ ಮಾಡಲಾದ ನೇಮಕಾತಿ | | ಹೆಚ್ಚುವರಿ ಕೊರತೆ | | ನಂತರದ ಬ್ಲಾಕಿನಲ್ಲಿ ಹೊಂದಿಸಬೇಕಾದ ಹೆಚ್ಚುವರಿ ನೇಮಕಾತಿ | | ನೇಮಕಾತಿಗಳ ಸಂಚಿತ (+) ಕೊರತೆ (-) | | ಜೇಷ್ಠತೆಗಾಗಿ ಕ್ರಮ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| 1. | 20/06/60ರಿಂದ 25/10/62ರವರೆಗೆ | 6 | ಶೇ.13.1/2ನೇರ ನೆಮಕಾತಿ ಶೇ.66.2/3 ಮುಂಬಡ್ತಿ | 2 | 4 | 2 | 4 | 2 | 4 | - | - | - | - | - | - | 1 ರಿಂದ 6ರವರೆಗೆ |
| 2. | 26/10/62 ರಿಂದ 27/10/64ರವರೆಗೆ | 4 | ಶೇ.622/3ನೇರ ನೇಮಕಾತಿ ಶೇ.33.1/3 ಮುಂಬಡ್ತಿ | 3 | 1 | 3 | 1 | 3 | 1 | - | - | - | - | - | - | 7 ರಿಂದ 10ರವರೆಗೆ |
| 3. | 28.10/64 ರಿಂದ 26/05/69ರವರೆಗೆ | 11 | ಶೇ.62.2/3ನೇರ ನೇಮಕಾತಿ ಶೇ.33.1/3 ಮುಂಬಡ್ತಿ | 7 | 4 | 7 | 4 | 7 | 4 | - | - | - | - | - | - | 11 ರಿಂದ 22ರವರೆಗೆ |
| 4. | 27/06/69 ರಿಂದ 30/07/82ರವರೆಗೆ | 41 | ಶೇ.62.2/3ನೇರ ನೇಮಕಾತಿ ಶೇ.33.1/3 ಮುಂಬಡ್ತಿ | 27 | 14 | 20 | 21 | 20 | 14 | -7 | +7 | -7 | +7 | -7 | +7 | 23 ರಿಂದ 63ರವರೆಗೆ |
| 5. | 31/07/82 ರಿಂದ 30/01/84ರವರೆಗೆ | 4 | ಶೇ.62.2/3ನೇರ ನೇಮಕಾತಿ ಶೇ.33.1/3 ಮುಂಬಡ್ತಿ | 3 | 1 | 1 | 3 | 1 | 1 | -2 | +2 | -9 | +9 | -9 | +9 | 64 ರಿಂದ 67ರವರೆಗೆ |
| 6. | 31/01/84 ರಿಂದ 04/04/90ರವರೆಗೆ | 4 | ಶೇ.62.2/3ನೇರ ನೇಮಕಾತಿ ಶೇ.33.1/3 ಮುಂಬಡ್ತಿ | 19 | 10 | - | 10 | - | 10 | -19 | - | -28 | +9 | -28 | +9 | 68 ರಿಂದ 77ರವರೆಗೆ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
|---|---|---|---|---|---|---|---|---|---|---|---|---|---|---|---|---|
| 7. | 05/04/90 ರಿಂದ 25/07/92ರವರೆಗೆ | - | ನೇರ ನೇಮ ಕಾತಿಯಲ್ಲಿ ಶೇ.100 ಮುಂಬಡ್ತಿ | ದಿನಾಂಕ:05.04.1990ರಿಂದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿಯನ್ನು ತರುವಲ್ಲಿ ಎಲ್ಲಾ ಮೀನುಗಾರಿಕೆ ಸಹಾಯಕ ನಿರ್ದೇಶಕರು-1) ವೃಂದದ ಹುದ್ದೆಗಳನ್ನು ಪದೋನ್ನತಿಯಿಂದಲೇ ಭರ್ತಿ ಮಾಡಲು ಉದ್ದೇಶಿಸಿ ಅಂತೆಯೇ ತಿದ್ದುಪಡಿಯನ್ನು ಹೊರಡಿಸಲಾಯಿತು. ಆದ್ದರಿಂದ 05.04.1990ರಿಂದ ಉದ್ಭವಿಸಿದ ಎಲ್ಲಾ ಹುದ್ದೆಗಳನ್ನು ಬಡ್ತಿಯಿಂದಲೇ ಭರ್ತಿ ಮಾಡಬೇಕಾಗಿದ್ದು, ಹಿಂದಿನ ನೇರ ನೇಮಕಾತಿಗೆ ವರ್ಗೀಕರಿಸಿದ ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಲು ನಿಯಮದ ಪ್ರಕಾರ ಬರುವುದಿಲ್ಲ. ಆದರೆ, ಈ ನಡುವೆ ಹಿಂದಿನ ನೇರ ನೇಮಕಾತಿಯ ನಿಯಮದ ಪ್ರಕಾರ ಬ್ಯಾಕ್‌ಲಾಗ್ ಹುದ್ದೆಗಳೆಂದು ವರ್ಗೀಕರಿಸಿದ 2 ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ತಿಳಿಸಲಾಗಿದ್ದು, ಪ್ರಕಟಣೆಯ ನಂಗರ ಲೋಕಸೇವಾ ಆಯೋಗವು ಆಯ್ಕೆ ಮಾಡಿದ 2 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1) ಹುದ್ದೆಗಳನ್ನು ಪರಿಷ್ಕರಿಸಿದ ನೇರ ನೇಮಕಾತಿಯ ನಿಯಮಗಳು ಜಾರಿಗೆ ಬರುವ ಮುಂಚಿತವಾಗಿ ತುಂಬಬೇಕಾಗಿ ಬಂದ ಕಾರಣ ಈ ಹುದ್ದೆಗಳನ್ನು ದಿನಾಂಕ:25.07.1990ರಂದು ಸದರಿ ಆದ್ಯತೆಯನ್ನು ಕೆಲಸಕ್ಕೆ ಸೇರಿದ ದಿನಾಂಕದಿಂದ ಅವರಿಗೆ ಆದ್ಯತೆ ನೀಡಿ ಅವರನ್ನು ಜೇಷ್ಠತಾ ಪಟ್ಟಿಯಲ್ಲಿನ ಕ್ರಮಸಂಖ್ಯೆ 95 ಮತ್ತು ಕ್ರಮ ಸಂಖ್ಯೆ 96ರಲ್ಲಿ ಸೇರಿಸಲಾಗಿದೆ. | | | | | | | | | | | | |
| 8. | 25/07/92 ರಿಂದ 31/12/2000ರ ವರೆಗೆ | 36 | ಶೇ.100ರಷ್ಟು ಬಡ್ತಿ | ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1) ಹುದ್ದೆಗಳನ್ನು ಶೇಕಡಾ 100ರಷ್ಟು ಮುಂಬಡ್ತಿಯಿಂದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) ಹುದ್ದೆಯಿಂದ ಬಡ್ತಿ ಮಾಡಬೇಕಾಗಿರುವುದರಿಂದ, ಈ ಹುದ್ದೆಗಳಿಗೆ ವರ್ಗೀಕರಣ ಅನ್ವಯಿಸುವುದಿಲ್ಲ. | | | | | | | | | | | | |
| 9. | 01/01/2000 ರಿಂದ 31/03/04ರವರೆಗೆ | 19 | ಶೇ.100ರಷ್ಟು ಬಡ್ತಿ | ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1) ವೃಂದದ ಹುದ್ದೆಗಳನ್ನು ಶೇಕಡಾ 100ರಷ್ಟು ಮುಂಬಡ್ತಿಯಿಂದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) ಹುದ್ದೆಯಿಂದ ಬಡ್ತಿ ಮಾಡಬೇಕಾಗಿರುವುದರಿಂದ, ಈ ಹುದ್ದೆಗಳಿಗೆ ವರ್ಗೀಕರಣ ಅನ್ವಯಿಸುವುದಿಲ್ಲ. | | | | | | | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಅನುಬಂಧ-2

## ದಿನಾಂಕ:31.03.2004ರಂದು ಇದ್ದಂತೆ ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ

| ಕ್ರ. ಸಂ. | ಹೆಸರು/ ಶ್ರೀಮತಿ/ ಶ್ರೀಯುತರುಗಳಾದ | ನೇರ ನೇಮಕಾತಿ/ ಮುಂಬಡ್ತಿ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **1/11/1956 to 19/06/1960 (No Rule period)** | | | | | | | | |
| 1. | ಡಿ.ಆರ್. ಕೃಷ್ಣಮೂರ್ತಿ | ಮುಂಬಡ್ತಿ | | 18.05.1916 | 07.02.1941 | 02.08.1957 | 02.08.1957 | ನಿವೃತ್ತಿ |
| 2. | ಎನ್. ಬಸವಯ್ಯ | ಮುಂಬಡ್ತಿ | | 11.04.1916 | 01.08.1941 | 18.08.1957 | 13.08.1957 | ನಿಧನ ರಾಗಿದ್ದಾರೆ. |
| 3. | ಎನ್. ಶ್ರೀನಿವಾಸನ್ | ಮುಂಬಡ್ತಿ | | 08.04.1918 | 04.07.1945 ಎ.ಎನ್. | 06.03.1969 | 01.05.1958 | ನಿವೃತ್ತಿ |
| 4. | ಹೆಚ್. ಹೊನ್ನಪ್ಪಗೌಡ | ಮುಂಬಡ್ತಿ | | 06.10.1922 | 26.01.1946 | 04.12.1959 | 06.03.1959 | ನಿವೃತ್ತಿ |
| 5. | ಬಿ. ಶಾಂತಾರಾಂ ರೈ | ಮುಂಬಡ್ತಿ | | 12.12.1918 | 01.02.1946 | 01.05.1958 | 20.11.1959 | ನಿವೃತ್ತಿ |
| 6. | ಜೆ.ಆರ್. ಯೆರ್ಮಲ್ | ಮುಂಬಡ್ತಿ | | 02.03.1919 | 05.11.1945 | 24.11.1959 | 24.11.1959 | ನಿವೃತ್ತಿ |
| 7. | ಕೆ. ವೆಂಕಟೇಶ್ | ಮುಂಬಡ್ತಿ | | 06.08.1923 | 19.02.1944 | 20.11.1959 | 01.12.1959 | ನಿವೃತ್ತಿ |
| 8. | ಸಿ.ಜಿ. ಕೃಷ್ಣಮೂರ್ತಿ | ಭಾರತ ಸರ್ಕಾರದ ಸೇವೆಯಿಂದ ವಿಲೀನಗೊಳಿಸಿದೆ | | 17.01.1926 | 01.04.1949 | 18.07.1957 | 01.12.1959 | ನಿವೃತ್ತಿ |
| | | | | (ಭಾರತ ಸರ್ಕಾರದ ಸೇವೆಯಲ್ಲಿ) | | | | |
| 9. | ಕೆ. ಶ್ರೀಪಾದ ರಾವ್ | ಮುಂಬಡ್ತಿ | | 09.01.1926 | 18.12.1948 | 16.09.1960 | 04.12.1959 | ನಿವೃತ್ತಿ |
| **I Block-20-06-1960 to 17-08-1962** | | | | | | | | |
| 1. | ವಿ.ಸಿ. ಬಾದಾಮಿ | ಮುಂಬಡ್ತಿ | | 01.11.1924 | 09.11.1949 | 19.06.1961 | 19.09.1960 | ನಿವೃತ್ತಿ |
| 2. | ಸುವರ್ಣ ಕೇಸರಿ | ಮುಂಬಡ್ತಿ | | 03.08.1926 | 01.12.1954 | 19.06.1961 | 19.06.1961 | ನಿವೃತ್ತಿ |
| 3. | ಎಂ.ಎ. ಹೊನ್ನಪ್ಪ | ಮುಂಬಡ್ತಿ | | 27.03.1923 | 22.05.1947 | 02.08.1961 | 19.06.1961 | ನಿವೃತ್ತಿ |
| 4. | ಜಿ. ಗಾನನೀಲ | ನೇರ ನೇಮಕಾತಿ | | 13.03.1936 | 27.08.1960 | 06.08.1962 | 06.08.1962 | ನಿವೃತ್ತಿ |
| 5. | ಬಿ.ಎಲ್. ಕೊಟಲಾಗಿ | ಮುಂಬಡ್ತಿ | | 14.03.1931 | 14.07.1955 | 07.09.1962 | 02.08.1961 | ನಿವೃತ್ತಿ |
| 6. | ವಿ. ಮುದ್ದಣ್ಣ | ನೇರನೇಮಕಾತಿ | | 28.06.1936 | 15.11.1961 | 17.08.1962 | 17.08.1962 | ನಿಧನ ರಾಗಿದ್ದಾರೆ |
| **II Block-18-08-1962 to 25-10-1962**<br>**No appointments and no promotions** | | | | | | | | |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| **III Block-26-10-1962 to 27-10-1964** | | | | | | | | |
| 7. | ಸಯ್ಯದ್ ಕಾದರ್ ಷಾಹ | ಮುಂಬಡ್ತಿ | | 23.12.1907 | 12.01.1930 | 01.09.1962 | 01.09.1962 | ನಿವೃತ್ತಿ |
| 8. | ಆರ್.ಎಸ್. ವರ್ಡೇಕರ್ | ನೇರನೇಮಕಾತಿ | | 01.10.1935 | 14.11.1959 | 27.10.1964 | 27.10.1964 | ನಿವೃತ್ತಿ |
| 9. | ಬಿ. ಚಂದ್ರಶೇಖರ | ನೇರನೇಮಕಾತಿ | | 10.06.1932 | 09.08.1958 | 25.04.1964 | 25.04.1964 | ನಿವೃತ್ತಿ |
| 10. | ಹೆಚ್.ಎನ್. ಚಂದ್ರ ಶೇಖರಯ್ಯ | ನೇರನೇಮಕಾತಿ | | 02.05.1933 | 28.01.1958 | 22.10.1964 | 22.10.1964 | ನಿವೃತ್ತಿ |
| **IV Block-28-10-1964 to 26-05-1969** | | | | | | | | |
| 11. | ಹೆಚ್.ಎನ್. ಸಿದ್ದಯ್ಯ | ನೇರನೇಮಕಾತಿ | | 15.03.1924 | 06.07.1949 | 25.04.1964 | 25.04.1964 | ನಿವೃತ್ತಿ |
| 12. | ಎಂ.ಎ. ನಯೀದ್ | ಭಾರತ ಸರ್ಕಾರದ ಸೇವೆಯಿಂದ ವಿಲೀನಗೊಳಿಸಿದೆ | | 01.12.1924 | 05.12.1956 | 09.10.1967 | 09.10.1967 | ನಿವೃತ್ತಿ |
| | | | | (ಭಾರತ ಸರ್ಕಾರದ ಸೇವೆಯಲ್ಲಿ) | | | | |
| 13. | ಎಸ್.ಎಂ. ವಸ್ತ್ರದ್ | ಮುಂಬಡ್ತಿ | | 25.05.1915 | 14.10.1949 | 24.05.1968 | 24.05.1968 | ನಿವೃತ್ತಿ |
| 14. | ವಿ.ಎಂ. ಬಲ್ವಳ್ಳಿ | ಮುಂಬಡ್ತಿ | | 18.02.1918 | 17.08.1942 | 31.05.1968 | 31.05.1968 | ನಿವೃತ್ತಿ |
| 15. | ಬಿ.ಆರ್.ಜಿ. ಪ್ರಸಾದ್ | ಮುಂಬಡ್ತಿ | | 27.02.1923 | 26.02.1945 | 04.12.1968 | 04.12.1968 | ನಿವೃತ್ತಿ |
| 16. | ಎಂ.ಎನ್. ವೆಂಕಟಗಿರಿ | ಮುಂಬಡ್ತಿ | | 16.06.1918 | 16.07.1945 | 04.12.1968 | 04.12.1968 | ನಿವೃತ್ತಿ |
| 17. | ಒ.ಕೆ. ಅಜ್ಜಪ್ಪ | ನೇರನೇಮಕಾತಿ | | 08.05.1933 | 29.01.1958 | 19.05.1969 | 19.05.1969 | ನಿವೃತ್ತಿ |
| 18. | ಎಸ್.ಎನ್. ಷಣ್ಮುಖ | ನೇರನೇಮಕಾತಿ | | 27.11.1941 | 23.10.1963 | 19.05.1969 | 19.05.1969 | ನಿವೃತ್ತಿ |
| 19. | ಅಡವಿ ರಾವ್ | ನೇರನೇಮಕಾತಿ | | 24.09.1937 | 26.05.1969 | 26.05.1969 | 26.05.1969 | ನಿವೃತ್ತಿ |
| 20. | ಡಿ.ಎಂ. ಅಬ್ದುಲ್ ಹಮೀದ್ | ನೇರನೇಮಕಾತಿ | | 17.06.1944 | 26.05.1969 | 26.05.1969 | 26.05.1969 | ನಿವೃತ್ತಿ |
| 21. | ಶ್ರೀಮತಿ ಟಿ. ಸುಶೀಲಾ ದೇವಿ | ನೇರನೇಮಕಾತಿ | | 13.05.1930 | 21.05.1969 | 21.05.1969 | 21.05.1969 | ನಿಧನ |
| 22. | ಕೆ. ಶಾಮಭಟ್ | ನೇರನೇಮಕಾತಿ | | 19.04.1943 | 23.05.1969 | 23.05.1969 | 23.05.1969 | ನಿವೃತ್ತಿ |
| **V-Block-27-05-1969 to 30-07-1982** | | | | | | | | |
| 23. | ಕೆ.ಎಸ್. ತಿಮ್ಮಾರೆಡ್ಡಿ | ಮುಂಬಡ್ತಿ | | 04.03.1918 | 09.11.1945 | 01.04.1971 | 01.04.1971 | ನಿವೃತ್ತಿ |
| 24. | ಡಿ. ಶಿವರಾಜೇಗೌಡ | ಮುಂಬಡ್ತಿ | | 05.04.1921 | 03.05.1947 | 17.07.1974 | 17.07.1974 | ನಿವೃತ್ತಿ |
| 25. | ಎನ್. ನಾರಾಯಣ | ಮುಂಬಡ್ತಿ | | 15.04.1926 | 14.04.1948 | 17.07.1974 | 17.07.1974 | ನಿವೃತ್ತಿ |
| 26. | ಬಿ.ಹೆಚ್. ಗೌಡ | ಮುಂಬಡ್ತಿ | | 18.06.1925 | 05.06.1948 | 20.07.1974 | 20.07.1974 | ನಿವೃತ್ತಿ |
| 27. | ಎಂ. ನಾರಾಯಣ | ಮುಂಬಡ್ತಿ | | 19.07.1919 | 22.06.1944 | 17.07.1974 | 17.07.1974 | ನಿವೃತ್ತಿ |
| 28. | ಸಿ. ಚನ್ನಪ್ಪ | ಮುಂಬಡ್ತಿ | | 01.10.1924 | 22.01.1960 | 17.07.1974 | 17.07.1974 | ನಿವೃತ್ತಿ |
| 29. | ಸಿ. ಮಹಮ್ಮದ್ ಉಸ್ಮಾನ್ | ಮುಂಬಡ್ತಿ | | 01.07.1927 | 10.06.1952 | 25.09.1975 | 08.07.1975 | ನಿವೃತ್ತಿ |
| 30. | ಬಿ.ಎನ್. ನಂಜುಂಡ ಸ್ವಾಮಿ | ಮುಂಬಡ್ತಿ | | 19.07.1929 | 07.07.1953 | 08.07.1975 | 08.07.1975 | ನಿವೃತ್ತಿ |
| 31. | ಕೆ.ಬಿ. ಹನುಮಂತರಾವ್ | ಮುಂಬಡ್ತಿ | | 03.05.1932 | 02.04.1955 | 10.07.1975 | 10.07.1975 | ನಿವೃತ್ತಿ |
| 32. | ಈರಣ್ಣ | ಮುಂಬಡ್ತಿ | | 15.03.1938 | 07.06.1956 | 06.10.1975 | 06.10.1975 | ನಿಧನ |
| 33. | ಕಾಪಿಲ್ ಅಬ್ದುಲ್ ಖದೀರ್ | ಮುಂಬಡ್ತಿ | | 12.07.1924 | 01.08.1944 | 28.05.1976 | 06.10.1975 | ನಿವೃತ್ತಿ |
| 34. | ಎಂ.ಟಿ. ಅಬ್ದುಲ್ ರಹಮಾನ್ | ಮುಂಬಡ್ತಿ | | 24.02.1922 | 05.02.1948 | 28.05.1976 | 06.10.1975 | ನಿವೃತ್ತಿ |
| 35. | ಎಂ. ಸೀತರಾಂ | ಮುಂಬಡ್ತಿ | | 25.06.1925 | 25.04.1954 | 14.06.1976 | 06.10.1975 | ನಿವೃತ್ತಿ |
| 36. | ವಿ.ಜಿ. ಪಿಳ್ಳೈ | ಮುಂಬಡ್ತಿ | | 19.07.1923 | 29.02.1955 | 29.02.1976 | 06.10.1975 | ನಿವೃತ್ತಿ |
| 37. | ಬಿ.ಎಸ್. ಭಂಡಾರಿ | ಮುಂಬಡ್ತಿ | | 03.09.1926 | 12.01.1958 | 25.05.1976 | 06.10.1975 | ನಿವೃತ್ತಿ |
| 38. | ಬಿ.ವಿ. ಮುಜುಂದಾರ್ | ಮುಂಬಡ್ತಿ | | 08.08.1931 | 24.06.1957 | 22.07.1975 | 06.10.1975 | ನಿವೃತ್ತಿ |
| 39. | ಎಂ. ಜಯದೇವ್ | ಮುಂಬಡ್ತಿ | | 16.02.1934 | 07.11.1959 | 08.07.1975 | 06.10.1976 | ನಿವೃತ್ತಿ |
| 40. | ಎಂ.ಸಿ. ಕೃಷ್ಣಪ್ರಸಾದ್ | ಮುಂಬಡ್ತಿ | | 14.02.1936 | 13.07.1959 | 08.07.1975 | 06.10.1975 | ನಿವೃತ್ತಿ |
| 41. | ಕೆ.ಹೆಚ್. ಪಟೇಲ್ | ಮುಂಬಡ್ತಿ | | 03.02.1938 | 16.07.1969 | 11.07.1975 | 06.10.1975 | ನಿವೃತ್ತಿ |
| 42. | ಎಸ್. ಚಂದ್ರಶೇಖರಪ್ಪ | ಮುಂಬಡ್ತಿ | | 15.05.1938 | 27.11.1969 | 10.07.1975 ಎ.ಎನ್. | 06.10.1975 | ನಿವೃತ್ತಿ |
| 43. | ಟಿ. ಶಯೀಬ್ ಅಹಮದ್ ಖಾನ್ | ಮುಂಬಡ್ತಿ | | 14.06.1936 | 16.10.1963 | 11.09.1976 ಎ.ಎನ್. | 06.10.1975 | ನಿವೃತ್ತಿ |
| 44. | ಹೆಚ್.ಎಸ್. ವೀರಪ್ಪ ಗೌಡ | ನೇರನೇಮಕಾತಿ | | 26.09.1958 | 13.02.1985 | 13.02.1985 | 13.02.1985 | ಬಡ್ತಿ ಹೊಂದಿ ರುತ್ತಾರೆ. |
| 45. | ಕೆ. ಗಣಪತಿ ಭಟ್ | ನೇರನೇಮಕಾತಿ | | 28.12.1957 | 01.04.1982 | 01.04.1982 | 01.04.1982 | ಬಡ್ತಿ ಹೊಂದಿ ರುತ್ತಾರೆ. |
| 46. | ಎಂ.ಜಿ. ಜಯರಾಂ | ನೇರನೇಮಕಾತಿ | | 25.04.1952 | 22.07.1982 | 22.07.1982 | 22.07.1982 | ಬಡ್ತಿ ಹೊಂದಿ ರುತ್ತಾರೆ. |
| 47. | ಬಿ. ರಂಜನ್‌ರಾವ್ | ನೇರನೇಮಕಾತಿ | | 29.11.1957 | 15.03.1982 | 15.03.1982 | 15.03.1982 | ನಿಧನ ರಾಗಿದ್ದಾರೆ |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 48. | ಡಾ: ಸಿ.ಕೆ. ಮೂರ್ತಿ | ನೇರನೇಮಕಾತಿ | | 20.10.1957 | 15.03.1982 | 15.03.1982 | 15.03.1982 | ಬಡ್ತಿ ಹೊಂದಿರುತ್ತಾರೆ |
| 49. | ವಿಚಿತ್ರಕುಮಾರ್ ಶೆಟ್ಟಿ | ನೇರನೇಮಕಾತಿ | | 18.07.1957 | 12.04.1982 | 12.04.1982 | 12.04.1982 | ಬಡ್ತಿ ಹೊಂದಿರುತ್ತಾರೆ |
| 50. | ಗಂಗಾಧರ್ ವಿ. ಮಡ್ಡಿಕೇರಿ | ನೇರನೇಮಕಾತಿ | | 22.06.1957 | 12.03.1982 | 12.03.1982 | 12.03.1982 | ಬಡ್ತಿ ಹೊಂದಿರುತ್ತಾರೆ |
| 51. | ಡಾ: ಎನ್.ಆರ್. ರಾಮಕೃಷ್ಣ | ನೇರನೇಮಕಾತಿ | | 20.04.1956 | 11.03.1982 | 11.03.1982 | 11.03.1982 | ಬಡ್ತಿ ಹೊಂದಿರುತ್ತಾರೆ |
| 52. | ಸಿ.ಹೆಚ್. ತಿಪ್ಪೇಸ್ವಾಮಿ | ನೇರನೇಮಕಾತಿ | | 01.08.1950 | 11.03.1982 | 11.03.1982 | 11.03.1982 | ನಿಧನರಾಗಿದ್ದಾರೆ. |
| 53. | ಯು. ರಾಮಚಂದ್ರ | ನೇರನೇಮಕಾತಿ | | 17.03.1956 | 15.03.1982 | 15.03.1982 | 15.03.1982 | ಬಡ್ತಿ ಹೊಂದಿರುತ್ತಾರೆ. |
| 54. | ಆರ್.ಬಿ. ಯರಗಲ್ | ನೇರನೇಮಕಾತಿ | | 01.05.1955 | 20.04.1982 | 20.04.1982 | 20.04.1982 | ಬಡ್ತಿ ಹೊಂದಿರುತ್ತಾರೆ. |
| 55. | ಟಿ. ವೆಂಕಟೇಶಪ್ಪ | ನೇರನೇಮಕಾತಿ | | 08.05.1956 | 31.03.1982 | 31.03.1982 | 31.03.1982 | ಬಡ್ತಿ ಹೊಂದಿರುತ್ತಾರೆ. |
| 56. | ರಾಮಚಂದ್ರ ಎನ್. ಹೆಗಡೆ | ನೇರನೇಮಕಾತಿ | | 10.05.1958 | 31.03.1982 | 31.03.1982 | 31.03.1982 | ರಾಜೀನಾಮೆ ನೀಡಿದ್ದಾರೆ |
| 57. | ಡಾ: ಸಿ.ಎಲ್. ರಾಮಯ್ಯ | ನೇರನೇಮಕಾತಿ | | 22.03.1956 | 31.03.1982 | 31.02.1982 | 31.03.1982 | ಬಡ್ತಿ ಹೊಂದಿರುತ್ತಾರೆ |
| 58. | ಸುರೇಶ್ ಕುಮಾರ್ | ನೇರನೇಮಕಾತಿ | | 01.06.1956 | 30.07.1982 | 30.07.1982 | 30.07.1982 | ಬಡ್ತಿ ಹೊಂದಿರುತ್ತಾರೆ |
| 59. | ಪಾಪಣ್ಣ | ನೇರನೇಮಕಾತಿ | | 21.03.1955 | 05.04.1982 | 05.04.1982 | 05.04.1982 | ಬಡ್ತಿ ಹೊಂದಿರುತ್ತಾರೆ |
| 60. | ಬಿ.ಆರ್. ಜಗದೀಶ್ | ನೇರನೇಮಕಾತಿ | | 07.01.1965 | 11.10.1976 | 31.03.1982 | 31.03.1982 | ಬಡ್ತಿ ಹೊಂದಿರುತ್ತಾರೆ |
| 61. | ನಸೀಂ ಅಫ್ಸರ್ | ನೇರನೇಮಕಾತಿ | | 15.05.1957 | 01.04.1982 | 01.04.1982 | 01.04.1982 | ಬಡ್ತಿ ಹೊಂದಿರುತ್ತಾರೆ |
| 62. | ಕೆ. ಗೋಪಾಲರೆಡ್ಡಿ | ನೇರನೇಮಕಾತಿ | | 01.02.1957 | 31.03.1982 | 31.03.1982 | 31.02.1982 | ಬಡ್ತಿ ಹೊಂದಿರುತ್ತಾರೆ |
| 63. | ಎಂ.ಡಿ. ಪ್ರಸಾದ್ | ನೇರನೇಮಕಾತಿ | | 31.12.1955 | 08.04.1982 | 08.04.1982 | 08.04.1982 | ಬಡ್ತಿ ಹೊಂದಿರುತ್ತಾರೆ |
| **VI-Block-31-07-1982 to 30-01-1984** | | | | | | | | |
| 64. | ಪಿ. ಸ್ವಾಮಿ | ಮುಂಬಡ್ತಿ | | 15.12.1934 | 16.10.1963 | 12.09.1975 | 19.11.1982 | ನಿವೃತ್ತಿ |
| 65. | ಎಂ.ಹೆಚ್. ನೆಗಳೂರ್ | ಮುಂಬಡ್ತಿ | | 03.10.1936 | 16.10.1963 | 12.09.1975 | 06.02.1983 | ನಿವೃತ್ತಿ |
| 66. | ಎಸ್.ವಿ. ಯಳಮಲಿ | ಮುಂಬಡ್ತಿ | | 01.02.1939 | 16.10.1963 | 16.09.1975 | 07.02.1983 | ನಿವೃತ್ತಿ |
| 67. | ಎಸ್.ಸಿ. ಹೇಮಂತರಾಜು | ನೇರನೇಮಕಾತಿ | | 26.06.1956 | 30.01.1984 | 30.01.1984 | 30.01.1984 | ಬಡ್ತಿ ಹೊಂದಿರುತ್ತಾರೆ |
| **ಬ್ಲಾಕ್ ಅವಧಿ 31.01.1984 ರಿಂದ 04.04.1990 ರವರೆಗೆ** | | | | | | | | |
| 68. | ಕೆ.ಎಸ್. ಮೃತ್ಯುಂಜಯ | ಮುಂಬಡ್ತಿ | ಮೀಸಲಾತಿ ಪದ್ಧತಿ 1978ನೇ ಸಾಲಿನಿಂದ ಪ್ರಾರಂಭವಾಗಿರುವುದರಿಂದ ಕ್ರ.ಸಂ. 68 ರಿಂದ 87ರ ವರೆಗೆ ಮೀಸಲಾತಿ ವರ್ಗ ಅನ್ವಯಿಸುವುದಿಲ್ಲ | 26.12.1934 | 16.10.1963 | 15.10.1975 | 21.03.1984 | ನಿವೃತ್ತಿ |
| 69. | ವೆಂಕಟರಮಣ | ಮುಂಬಡ್ತಿ | | 19.11.1934 | 16.10.1963 | 24.07.1975 | 31.07.1984 | ನಿವೃತ್ತಿ |
| 70. | ಜಿ.ಎಸ್. ಸಂಗೀತ್ | ಮುಂಬಡ್ತಿ | | 02.06.1937 | 16.10.1963 | 18.09.1975 | 16.10.1984 | ನಿವೃತ್ತಿ |
| 71. | ಎಂ.ಆರ್. ರಾಮೇಗೌಡ | ಮುಂಬಡ್ತಿ | | 04.06.1934 | 16.10.1963 | 23.09.1975 | 01.01.1985 | ನಿವೃತ್ತಿ |
| 72. | ಎಸ್.ಎಂ. ಶಿವಶಂಕರಪ್ಪ | ಮುಂಬಡ್ತಿ | | 25.11.1935 | 16.10.1963 | 11.09.1975 | 05.06.1985 | ನಿವೃತ್ತಿ |
| 73. | ಎಸ್. ಶಂಕರಪ್ರಸಾದ್ | ಮುಂಬಡ್ತಿ | | 06.04.1939 | 10.10.1963 | 12.09.1975 | 05.06.1986 | ನಿವೃತ್ತಿ |
| 74. | ಬಾಲಕೃಷ್ಣ | ಮುಂಬಡ್ತಿ | | 02.11.1939 | 16.10.1963 | 17.09.1975 | 05.06.1986 | ನಿವೃತ್ತಿ |
| 75. | ವಿ. ಪರಶುರಾಮ್ | ಮುಂಬಡ್ತಿ | | 26.06.1938 | 16.10.1963 | 19.09.1975 | 05.06.1986 | ಸ್ವಯಂ ನಿವೃತ್ತಿ |
| 76. | ಹೆಚ್.ಎಂ. ಪಂಪಾಪತಿ | ಮುಂಬಡ್ತಿ | | 25.04.1942 | 23.10.1963 | 17.09.1975 | 06.06.1986 | ನಿಧನರಾಗಿದ್ದಾರೆ |
| 77. | ಸಾಲಾರ್‌ಜಾನ್ | ಮುಂಬಡ್ತಿ | | 15.04.1936 | 16.10.1963 | 10.11.1975 | 0506.1986 | ನಿಧನರಾಗಿದ್ದಾರೆ |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| | | | ಬ್ಲಾಕ್ ಅವಧಿ 05.04.1990 ರಿಂದ 25.07.1992 ರವರೆಗೆ | | | | | |
| 78. | ಟಿ.ಎಸ್. ಹೊನ್ನಾಡ್ಕರ್ | ಮುಂಬಡ್ತಿ | | 01.05.1937 | 19.10.1963 | 29.09.1975 | 05.04.1990 | ನಿವೃತ್ತಿ |
| 79. | ಎನ್.ಆರ್. ಕುಲಕರ್ಣಿ | ಮುಂಬಡ್ತಿ | | 03.03.1936 | 23.10.1963 | 30.09.1975 | 05.04.1990 | ನಿವೃತ್ತಿ |
| 80. | ಎಸ್. ರಮಾಕಾಂತ್ | ಮುಂಬಡ್ತಿ | | 09.10.1940 | 08.11.1963 | 10.10.1975 | 05.04.1990 | ನಿಧನ |
| 81. | ವಿ.ಬಿ. ಚಕ್ರವರ್ತಿ | ಮುಂಬಡ್ತಿ | | 01.07.1934 | 24.10.1963 | 10.10.1975 | 05.04.1990 | ನಿವೃತ್ತಿ |
| 82. | ಜಿ.ಟಿ. ವೀರಣ್ಣ | ಮುಂಬಡ್ತಿ | | 05.10.1936 | 30.10.1963 | 06.06.1976 | 05.04.1990 | ನಿವೃತ್ತಿ |
| 83. | ಬಿ.ಕೆ. ಭಾಸ್ಕರ್ | ಮುಂಬಡ್ತಿ | | 06.01.1941 | 03.12.1965 | 05.07.1976 | 05.04.1990 | ನಿವೃತ್ತಿ |
| 84. | ಬಿ.ಕೆ. ಮಲ್ಲಿಕಾರ್ಜುನಯ್ಯ | ಮುಂಬಡ್ತಿ | | 08.08.1938 | 06.12.1965 | 02.02.1976 | 05.04.1990 | ನಿಧನ ರಾಗಿದ್ದಾರೆ |
| 85. | ಕೆ.ಆರ್. ಕೇಶವಮೂರ್ತಿ | ಮುಂಬಡ್ತಿ | | 12.04.1941 | 09.12.1965 | 03.07.1976 | 05.04.1990 | ನಿವೃತ್ತಿ |
| 86. | ಡಿ.ಆರ್. ರಘುನಾಥರಾವ್ | ಮುಂಬಡ್ತಿ | | 14.01.1943 | 06.12.1965 | 15.07.1976 | 05.04.1990 | ನಿವೃತ್ತಿ |
| 87. | ವೈ.ಎ. ಜನದತ್ತರಾಯ | ಮುಂಬಡ್ತಿ | | 08.06.1944 | 09.12.1965 | 15.07.1976 | 05.04.1990 | ನಿವೃತ್ತಿ |
| 88. | ಸಿ. ಸೋಮಶೇಖರ್ | ಮುಂಬಡ್ತಿ | ಎಸ್.ಸಿ. | 30.07.1937 | 29.11.1965 | 11.07.1979 | 05.04.1990 | ನಿಧನ ರಾಗಿದ್ದಾರೆ |
| 89. | ಪಿ.ಬಿ. ತಾಂಡೇಲ | ಮುಂಬಡ್ತಿ | | 05.06.1939 | 10.12.1985 | 04.08.1983 | 05.04.1990 | ನಿವೃತ್ತಿ |
| 90. | ಬಿ. ಆನಂದಮಾರ್ಕಳ | ಮುಂಬಡ್ತಿ | | 10.03.1935 | 04.09.1953 | 19.11.1979 | 05.04.1990 | ನಿವೃತ್ತಿ |
| 91. | ಬಿ.ಎಂ.ಎ. ಸಯ್ಯದ್ | ಮುಂಬಡ್ತಿ | | 09.08.1929 | 04.10.1954 | 01.03.1983 | 05.04.1990 | ನಿವೃತ್ತಿ |
| 92. | ಡಿ.ಕೆ. ರಾಮೇಗೌಡ | ಮುಂಬಡ್ತಿ | | 14.09.1922 | 10.12.1965 | 01.08.1979 | 05.04.1990 | ಸ್ವಯಂ ನಿವೃತ್ತಿ |
| 93. | ಜಿ.ಎಂ. ಕೊಟಯ್ಯ | ಮುಂಬಡ್ತಿ | | 01.07.1937 | 10.12.1965 | 01.07.1988 | 05.04.1990 | ನಿವೃತ್ತಿ |
| 94. | ಎಂ.ಸಿ. ಮನೋಹರ್ | ಮುಂಬಡ್ತಿ | | 06.11.1937 | 05.12.1965 | 04.07.1988 | 05.04.1990 | ಸ್ವಯಂ ನಿವೃತ್ತಿ |
| 95. | ಸಿದ್ದಯ್ಯ | ನೇರನೇಮಕಾತಿ | ಎಸ್.ಸಿ. | 12.05.1955 | 11.08.1979 | 25.07.1990 | 25.07.1990 | ಬಡ್ತಿ ಹೊಂದಿ ದ್ದಾರೆ |
| 96. | ಕುಬೇಂದ್ರ ನಾಯಕ್ | ನೇರನೇಮಕಾತಿ | ಎಸ್.ಸಿ. | 20.07.1956 | 01.02.1983 | 25.07.1990 | 25.07.1992 | ಬಡ್ತಿ ಹೊಂದಿ ದ್ದಾರೆ |
| 97. | ಸಿ. ಚೌಡಯ್ಯ | ಮುಂಬಡ್ತಿ | | 01.09.1938 | 08.12.1968 | 20.07.1992 | 25.07.1992 | ನಿವೃತ್ತಿ |
| 98. | ಎಂ.ಬಿ. ವಿಜಯರಂಗ ನಾಯ್ಡು | ಮುಂಬಡ್ತಿ | | 10.11.1940 | 03.08.1968 | 20.07.1992 | 25.07.1992 | ನಿಧನ ರಾಗಿದ್ದಾರೆ |
| 99. | ಎಸ್.ವಿ. ಸೋಮಶೇಖರ್ | ಮುಂಬಡ್ತಿ | | 05.04.1943 | 03.08.1968 | 20.07.1992 | 25.07.1992 | ನಿವೃತ್ತಿ |
| 100. | ಬಿ. ಸೋಮಶೇಖರಪ್ಪ | ಮುಂಬಡ್ತಿ | | 03.02.1945 | 03.08.1968 | 20.07.1992 | 25.07.1992 | ಸ್ವಯಂ ನಿವೃತ್ತಿ |
| 101. | ಫ್ರಾನ್ಸಿಸ್ ಮ್ಯಾಸ್ಕರ್‌ವೀಸ್ | ಮುಂಬಡ್ತಿ | | 03.12.1941 | 03.08.1968 | 20.07.1952 | 25.07.1992 | ನಿವೃತ್ತಿ |
| 102. | ವಸಂತಕುಮಾರ್ | ಮುಂಬಡ್ತಿ | | 02.10.1944 | 08.08.1968 | 20.07.1992 | 25.07.1992 | ನಿವೃತ್ತಿ |
| 103. | ಎಂ. ಲಕ್ಷ್ಮೀನಾರಾಯಣ ರೈ | ಮುಂಬಡ್ತಿ | | 06.01.1943 | 14.08.1968 | 20.07.1992 | 25.07.1992 | ನಿವೃತ್ತಿ |
| 104. | ಡಿ. ವೀರಶೇಖರಪ್ಪ | ಮುಂಬಡ್ತಿ | | 15.08.1941 | 03.08.1968 | 20.07.1992 | 25.07.1992 | ಸ್ವಯಂ ನಿವೃತ್ತಿ |
| 105. | ಎಂ. ವೀರೇಶ್ವರ | ಮುಂಬಡ್ತಿ | | 12.02.1944 | 08.12.1968 | 20.07.1992 | 25.07.1992 | ನಿವೃತ್ತಿ |
| 106. | ಜಿ.ವೈ. ಮಹೇಶ್ | ಮುಂಬಡ್ತಿ | | 15.10.1940 | 12.08.1968 | 20.07.1992 | 25.07.1992 | ನಿವೃತ್ತಿ |
| 107. | ಎಂ. ಸುಬ್ಬಿರೆಡ್ಡಿ | ಮುಂಬಡ್ತಿ | | 28.09.1942 | 09.08.1968 | 01.08.1992 | 25.07.1992 | ನಿವೃತ್ತಿ |
| 108. | ಕೆ. ನೀಲಕಂಠರಾವ್ | ಮುಂಬಡ್ತಿ | | 10.05.1940 | 12.08.1968 | 20.07.1992 | 25.07.19092 | ನಿವೃತ್ತಿ |
| 109. | ಜಿ.ಎಸ್. ವೆಂಕಟೇಶಪ್ರಸನ್ನ | ಮುಂಬಡ್ತಿ | | 24.11.1943 | 13.08.1968 | 20.07.1992 | 25.07.1992 | ನಿವೃತ್ತಿ |
| 110. | ಎಸ್. ಚಂದ್ರಪ್ಪ | ಮುಂಬಡ್ತಿ | | 04.06.1942 | 12.08.1968 | 01.10.1992 | 25.07.1992 | ನಿವೃತ್ತಿ |
| 111. | ಎ. ಮಲ್ಲರಾಜ ಅರಸ್ | ಮುಂಬಡ್ತಿ | | 20.11.1935 | 17.08.1968 | 30.07.1992 | 25.07.1992 | ನಿಧನ ರಾಗಿದ್ದಾರೆ |
| 112. | ಬಿ.ಎಲ್. ರಂಗಸ್ವಾಮಿ | ಮುಂಬಡ್ತಿ | | 28.12.1944 | 13.08.1968 | 20.07.1992 | 25.07.1992 | ನಿವೃತ್ತಿ |
| 113. | ದೊಡ್ಡಯ್ಯ | ಮುಂಬಡ್ತಿ | ಎಸ್.ಸಿ. | 28.03.1944 | 14.08.1968 | 20.07.1992 | 25.07.1992 | ನಿವೃತ್ತಿ |
| 114. | ಎ.ಎಂ. ಬಿರಾದಾರ್ | ಮುಂಬಡ್ತಿ | ಎಸ್.ಸಿ. | 12.08.1940 | 09.08.1968 | 25.07.1992 | 25.07.1992 | ನಿವೃತ್ತಿ |
| 115. | ಹೆಚ್.ಎಂ. ಕಲ್ಕೇರಿ | ಮುಂಬಡ್ತಿ | ಎಸ್.ಸಿ. | 12.02.1949 | 16.11.1970 | 20.07.1992 | 25.07.1992 | ನಿವೃತ್ತಿ |
| 116. | ಎಸ್.ಸಿ. ಕೃಷ್ಣಪ್ಪ | ಮುಂಬಡ್ತಿ | ಎಸ್.ಸಿ. | 02.06.1950 | 17.01.1973 | 29.07.1992 | 25.07.1992 | ಬಡ್ತಿ ಹೊಂದಿದ್ದಾರೆ |
| 117. | ಎ. ಎಲ್ಲಪ್ಪ | ಮುಂಬಡ್ತಿ | ಎಸ್.ಸಿ. | 18.01.1951 | 08.10.1976 | 01.08.1992 | 25.07.1992 | ನಿಧನ ರಾಗಿದ್ದಾರೆ |
| 118. | ಕೆ. ಕೃಷ್ಣಪ್ಪ | ಮುಂಬಡ್ತಿ | ಎಸ್.ಸಿ. | 18.10.1953 | 15.10.1976 | 29.07.1992 | 25.07.1992 | ಬಡ್ತಿ ಹೊಂದಿದ್ದಾರೆ |
| 119. | ಪಿ. ನಾಗರಾಜ್ | ಮುಂಬಡ್ತಿ | ಎಸ್.ಟಿ. | 04.06.1951 | 24.03.1983 | 01.08.1992 | 25.07.1992 | ಬಡ್ತಿ ಹೊಂದಿದ್ದಾರೆ |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| ಬ್ಲಾಕ್ ಅವಧಿ 26.07.1992 ರಿಂದ 31.12.2000ರವರೆಗೆ | | | | | | | | |
| 120. | ಬಿ.ಜಿ. ಮಹಾದೇವಪ್ಪ | ಮುಂಬಡ್ತಿ | | 10.12.1945 | 12.11.1970 | 23.05.1994 | 13.05.1994 | ನಿವೃತ್ತಿ |
| 121. | ಇ. ಎಡ್ವಿನ್ ಪಾಲರಾಜ್ | ಮುಂಬಡ್ತಿ | | 01.02.1949 | 12.11.1970 | 20.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 122. | ಬಿ.ಸಿ. ಚಂದ್ರಶೇಖರಯ್ಯ | ಮುಂಬಡ್ತಿ | | 06.05.1947 | 16.11.1970 | 30.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 123. | ಓ.ಕೆ. ಅಪ್ಪಣ್ಣ | ಮುಂಬಡ್ತಿ | | 22.08.1943 | 18.11.1970 | 22.05.1994 | 13.05.1994 | ನಿವೃತ್ತಿ |
| 124. | ಜನಕರಾಜ್ ಎಸ್. ಕೋಲ್ಹಾರ್ | ಮುಂಬಡ್ತಿ | | 20.03.1947 | 16.11.1970 | 27.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 125. | ಜಿ. ಪರಮೇಶ್ವರ | ಮುಂಬಡ್ತಿ | | 05.10.1945 | 12.11.1970 | 25.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 126. | ಹೆಚ್.ಎಂ. ಪೊಣ್ಣಪ್ಪರೆಡ್ಡಿ | ಮುಂಬಡ್ತಿ | | 20.06.1945 | 12.11.1970 | | 13.05.1994 | ಬಡ್ತಿ ಹೊಂದಿದ್ದಾರೆ |
| 127. | ಮೊಹಮ್ಮದ್ ರಫಿ ಉದ್ದೀನ್ | ಮುಂಬಡ್ತಿ | | 10.07.1948 | 13.11.1970 | 13.05.1994 | 13.05.1994 | |
| 128. | ರಮೇಶ್ ಪಟ್ವಾರಿ ಆರ್. | ಮುಂಬಡ್ತಿ | | 12.05.1947 | 18.11.1970 | 22.09.1994 | 13.05.1994 | ಬಡ್ತಿ ಹೊಂದಿದ್ದಾರೆ |
| 129. | ಹೆಚ್.ಎಂ. ಭಾಷಾಸಾಬ್ | ಮುಂಬಡ್ತಿ | | 01.07.1945 | 19.11.1970 | 01.08.1994 | 13.05.1994 | ಬಡ್ತಿ ಹೊಂದಿದ್ದಾರೆ |
| 130. | ಹೆಚ್. ಬಾಲಕೃಷ್ಣ | ಮುಂಬಡ್ತಿ | | 19.07.1949 | 16.11.1970 | 19.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 131. | ಜಿ.ಎನ್. ಜಯಪ್ರಕಾಶ್ | ಮುಂಬಡ್ತಿ | | 10.07.1949 | 08.02.1971 | 24.05.1994 | 13.05.1994 | ಬಡ್ತಿ ಹೊಂದಿದ್ದಾರೆ |
| 132. | ಎಂ. ನಂಜುಂಡಸ್ವಾಮಿ | ಮುಂಬಡ್ತಿ | ಎಸ್.ಸಿ. | 20.10.1949 | 18.10.1976 | 15.09.1994 | 13.05.1994 | ಬಡ್ತಿ ಹೊಂದಿದ್ದಾರೆ |
| 133. | ಕೆ.ಎಂ. ಮಲ್ಲಿಕಾರ್ಜುನಸ್ವಾಮಿ | ಮುಂಬಡ್ತಿ | ಎಸ್.ಸಿ. | 29.05.1951 | 15.10.1976 | 13.06.1994 | 13.05.1994 | ಬಡ್ತಿ ಹೊಂದಿದ್ದಾರೆ |
| 134. | ಸಯ್ಯದ್ ಆಲ್ತಾಫ್ ಅಹ್ಮದ್ | ಮುಂಬಡ್ತಿ | | 12.12.1939 | 12.08.1996 | 14.07.1996 | 30.05.1995 | ನಿವೃತ್ತಿ |
| 135. | ಹೆಚ್.ಡಿ. ಮಲ್ಲೇಶಪ್ಪ | ಮುಂಬಡ್ತಿ | | 06.12.1943 | 12.01.1968 | 03.06.1995 | 30.05.1995 | ನಿವೃತ್ತಿ |
| 136. | ಎಸ್.ವಿ. ರತ್ನಕುಮಾರ್ | ಮುಂಬಡ್ತಿ | | 04.04.1946 | 01.09.1969 | 31.05.1995 | 30.05.1995 | ಸ್ವಯಂನಿವೃತ್ತಿ |
| 137. | ಟಿ.ಕೆ. ಲೋಕನಾಥ್ | ಮುಂಬಡ್ತಿ | ಎಸ್.ಸಿ. | 28.11.1951 | 12.10.1976 | 23.06.1995 | 30.05.1995 | (ಇವರ ಜಾತಿ ಪ್ರಮಾಣ ಪತ್ರದ ಸಿಂಧುತ್ವದ ಬಗೆಗಿನ ವಿಷಯವು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ) |
| 137(ಎ) | ಡಿ. ತಿಪ್ಪೇಸ್ವಾಮಿ | ಮುಂಬಡ್ತಿ | ಎಸ್.ಟಿ. | 17.12.1964 | 06.07.1990 | 04.09.2001 | 30.05.1995 | ಸರ್ಕಾರದ ಅಧಿಸೂಚನೆ ಸಂಖ್ಯೆ: ಪಸಂಮೀ/67/ ಮೀಇಸೇ 2001 ದಿ:1.9.2001 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಪಸಂಮೀ/141/ ಮೀಇಸೇ/2003 ದಿನಾಂಕ:28.5. 2005ರ ಮೇರೆಗೆ. |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 138. | ಶ್ರೀನಿವಾಸ ರೆಡ್ಡಿ | ಮುಂಬಡ್ತಿ | | 12.06.1942 | 13.06.1969 | 01.07.1995 | 15.06.1995 | ನಿವೃತ್ತಿ |
| 139. | ಬಿ. ರಘುನಾಥರೆಡ್ಡಿ | ಮುಂಬಡ್ತಿ | | 10.08.1944 | 12.11.1969 | 09.01.1998 | 25.05.1997 | ನಿವೃತ್ತಿ |
| 140. | ಎ.ಎನ್. ಕುಮಾರ್ | ಮುಂಬಡ್ತಿ | | 25.09.1953 | 11.01.1973 | 14.11.1997 | 25.07.1997 | |
| 141. | ಹೆಚ್.ಜಿ. ಸತ್ಯಮೂರ್ತಿ | ಮುಂಬಡ್ತಿ | | 21.01.1950 | 17.01.1973 | 04.08.1997 | 25.07.1997 | |
| 142. | ಎ.ಎಸ್. ಬುರ್ಲೀ | ಮುಂಬಡ್ತಿ | | 25.05.1952 | 17.01.1973 | 04.08.1997 | 25.07.1997 | |
| 143. | ಕೆ. ಕೃಷ್ಣರಾಜ್ ಪುರಾಣಿಕ್ | ಮುಂಬಡ್ತಿ | | 17.06.1951 | 18.01.1973 | 11.08.1987 | 25.07.1997 | |
| 144. | ಜಿ. ಭದ್ರಸ್ವಾಮಿ | ಮುಂಬಡ್ತಿ | | 09.04.1950 | 15.01.1973 | 01.09.1997 | 25.07.1997 | |
| 145. | ಹೆಚ್.ಎನ್. ನರಸಿಂಹ ಮೂರ್ತಿ | ಮುಂಬಡ್ತಿ | | 29.07.1950 | 15.01.1973 | 12.01.1998 | 25.07.1997 | |
| 146. | ಎಂ.ಎಸ್. ಅನಂತ ನಾರಾಯಣ | ಮುಂಬಡ್ತಿ | | 05.04.1950 | 12.01.1973 | 10.12.1997 | 25.07.1997 | |
| 147. | ಎನ್. ರಮೇಶ್ ರಾವುತ್ | ಮುಂಬಡ್ತಿ | | 22.06.1946 | 17.01.1973 | 08.09.1997 | 25.07.1997 | |
| 148. | ಆರ್. ದೊಡ್ಡಲಿಂಗಪ್ಪ | ಮುಂಬಡ್ತಿ | | 01.06.1943 | 13.10.1969 | 04.08.1997 | 25.07.1997 | ಸ್ವಯಂನಿವೃತ್ತಿ |
| 149. | ಎ.ವಿ. ಜಹಗೀರದಾರ್ | ಮುಂಬಡ್ತಿ | | 24.01.1947 | 14.10.1969 | 20.10.1997 | 25.07.1997 | ನಿವೃತ್ತಿ |
| 150. | ಅಶೋಕ ವೈ. ಖಾನಾಪುರ | ಮುಂಬಡ್ತಿ | ಪ.ಜಾ. | 28.06.1954 | 27.04.1977 | 08.09.1997 | 25.07.1997 | |
| 151. | ಹೆಚ್.ಎಸ್. ಸಿದ್ದರಾಜು | ಮುಂಬಡ್ತಿ | ಪ.ಜಾ. | 05.10.1954 | 27.04.1977 | 31.10.1997 | 25.07.1997 | |
| | | | **ಬ್ಲಾಕ್ ಅವಧಿ 01.01.2001 ರಿಂದ 31.03.2004 ರವರೆಗೆ** | | | | | |
| 152. | ಎಲ್.ಆರ್. ರಾಮಸ್ವಾಮಿ | ಮುಂಬಡ್ತಿ | | 04.10.1945 | 16.10.1969 | 11.12.2002 | 03.08.2002 | ವಯೋ ನಿವೃತ್ತಿ |
| 153. | ಡಿ.ಹೆಚ್. ಮುಲ್ಲಾ | ಮುಂಬಡ್ತಿ | | 01.07.1947 | 18.10.1969 | 08.09.2002 | 03.08.2002 | |
| 154. | ಎಸ್.ಎಂ. ವೀರಣ್ಣ | ಮುಂಬಡ್ತಿ | | 02.06.1948 | 20.10.1976 | 31.08.2002 | 03.08.2002 | |
| 154(ಎ) | ಎಂ. ಆದಪ್ಪ | ಮುಂಬಡ್ತಿ | | 02.11.1952 | 20.10.1976 | 03.08.2002 | 03.08.2002 | ಅಧಿಸೂಚನೆ ಸಂಖ್ಯೆ: ಪಸಂಮೀ/ 200/ ಮೀಇಸೇ/ 2005(1) ದಿ:18.5.2000 ರನ್ವಯ ದಿ:3.8.2006 ರಿಂದ ಅನ್ವಯಿಸು ವಂತೆ ಪೂರ್ವಾನ್ವಯ ಬಡ್ತಿ ನೀಡಲಾಗಿದೆ. |
| 155. | ಎ. ಜಯಶೀಲರೆಡ್ಡಿ | ಮುಂಬಡ್ತಿ | | 08.04.1954 | 11.10.1976 | 06.08.2002 | 03.08.2002 | |
| 156. | ಜಿ.ವಿ. ಚೌಧರಿ | ಮುಂಬಡ್ತಿ | | 06.08.1949 | 08.10.1976 | 18.08.2002 | 03.08.2002 | |
| 157. | ಸುಧೀರ್ ಪಾಟೀಲ್ ಕುಲಕರ್ಣಿ | ಮುಂಬಡ್ತಿ | | 24.04.1954 | 18.11.1976 | 09.08.2002 | 03.08.2002 | |
| 158. | ಪಿ. ರಾಮಮೋಹನರೆಡ್ಡಿ | ಮುಂಬಡ್ತಿ | | 12.08.1953 | 18.10.1976 | 29.11.2002 | 03.08.2002 | |
| 159. | ಜೆ. ನಾಗರಾಜ | ಮುಂಬಡ್ತಿ | | 03.10.1952 | 01.12.1976 | 19.08.2002 | 03.08.2002 | |
| 160. | ವಿ.ಕೆ. ಧೂಳಖೇಡ್ | ಮುಂಬಡ್ತಿ | | 28.03.1955 | 10.01.1977 | 26.08.2002 | 03.08.2002 | |
| 161. | ವೈ.ಜಿ. ನಾಗರಾಳ | ಮುಂಬಡ್ತಿ | | 25.03.1952 | 27.04.1977 | 02.09.2002 | 03.08.2002 | |
| 162. | ಚಿಕ್ಕಲಿಂಗಯ್ಯ | ಮುಂಬಡ್ತಿ | | 20.06.1952 | 27.04.1977 | 05.08.2002 | 03.08.2002 | |
| 163. | ವಿ. ವೆಂಕಟಾಚಲಯ್ಯ | ಮುಂಬಡ್ತಿ | | 29.02.1953 | 27.04.1977 | 14.08.2002 | 03.08.2002 | |
| 164. | ಎಂ. ದಯಾನಂದ | ಮುಂಬಡ್ತಿ | | 12.10.1957 | 15.01.1983 | 14.08.2002 | 03.08.2002 | |
| 165. | ಹೆಚ್.ಎಸ್. ಚಂದ್ರಶೇಖರ್ | ಮುಂಬಡ್ತಿ | | 28.04.1958 | 24.01.1983 | 06.08.2002 | 03.08.2002 | |
| 166. | ಪಿ.ಟಿ. ಲಕ್ಷ್ಮಣರೆಡ್ಡಿ | ಮುಂಬಡ್ತಿ | | 26.09.1953 | 25.01.1983 | 05.09.2002 | 03.08.2002 | |
| 167. | ಆರ್. ಜಯಣ್ಣ | ಮುಂಬಡ್ತಿ | | 03.11.1956 | 02.02.1983 | 07.08.2002 | 03.08.2002 | |
| 168. | ಡಿ. ನಾಗರಾಜು | ಮುಂಬಡ್ತಿ | | 18.11.1955 | 06.04.1983 | 07.08.2002 | 03.08.2002 | |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 168(ಎ) | ವೆಂಕಟೇಶ್ | ಮುಂಬಡ್ತಿ | | 01.10.1951 | 06.04.1983 | 03.08.2002 | 03.08.2002 | ಅಧಿಸೂಚನೆ ಸಂಖ್ಯೆ: ಪಸಂಮೀ/ 200/ ಮೀಇಸೇ/ 2005(1) ದಿ:18.5.2006 ರನ್ವಯ ದಿ:3.8.2002 ರಿಂದ ಅನ್ವಯಿಸುವಂತೆ ಪೂರ್ವಾನ್ವಯ ಬಡ್ತಿ ನೀಡಲಾಗಿದೆ. |
| 169. | ಆರ್.ಕೆ. ದೊರೆಸ್ವಾಮಿ | ಮುಂಬಡ್ತಿ | | 26.08.1953 | 13.11.1978 | 09.08.2002 | 03.08.2002 | |

**ಡಿ. ಕಮಲಕುಮಾರ್**

ಪಿ.ಆರ್. 1119

ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಮತೀಯ ಅಲ್ಪಸಂಖ್ಯಾತರಿಗೆ ಶಾದಿಮಹಲ್/ ಸಮುದಾಯ ಭವನ ನಿರ್ಮಾಣಕ್ಕಾಗಿ ಅನುದಾನ ಮಂಜೂರು ಮಾಡುವ ಕಾರ್ಯಕ್ರಮದ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಕಇ 245 ಬಿಎಂಎಸ್ 2000 ದಿನಾಂಕ:05.10.2000.

2. ದಿನಾಂಕ:04.07.2006ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಖ್ ಜನಾಂಗದವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸುವ ಸಲುವಾಗಿ ಅದರಲ್ಲೂ ಪ್ರಮುಖವಾಗಿ ಮುಸ್ಲಿಂ ಜನಾಂಗದವರು ವಿವಾಹ ನೆರವೇರಿಸಲು ಶಾದಿಮಹಲ್‌ಗಳನ್ನು ನಿರ್ಮಿಸುವ ಅವಶ್ಯಕತೆ ಇರುತ್ತದೆ ಎಂದು ಮತ್ತು ಈ ಸಂಬಂಧ ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಖಾಸಗಿ ಸಂಸ್ಥೆಗಳು ಮುಂದೆ ಬಂದಲ್ಲಿ, ಅಂತಹ ಸಂಸ್ಥೆಗಳಿಗೆ ರೂ.5.00 ಲಕ್ಷಗಳ ಗರಿಷ್ಠ ಮೊತ್ತಕ್ಕೆ ಸೀಮಿತಗೊಳಿಸಿ ಕೆಲವು ಅಗತ್ಯ ಷರತ್ತುಗಳೊಂದಿಗೆ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸಭೆಯ ನಡವಳಿಗಳಲ್ಲಿ ಈ ಶಾದಿಮಹಲ್ ಯೋಜನೆಯು 2000ರಿಂದ ಪ್ರಚಲಿತವಾಗಿದ್ದು, ಈಗಿನ ಸನ್ನಿವೇಶದಲ್ಲಿ ಕಟ್ಟಡ ಸಾಮಗ್ರಿಗಳ ಬೆಲೆಗಳು ಹೆಚ್ಚಾಗಿರುವ ಹಿನ್ನೆಲೆಯಲ್ಲಿ ಹಾಗೂ ಈ ಸಮಾಜಕ್ಕೆ ಸಂಬಂಧಿಸಿದ ಸಂಘ ಸಂಸ್ಥೆಗಳು ಶಾದಿಮಹಲ್, ಸಮುದಾಯ ಭವನಗಳ ಕಟ್ಟಡಗಳ ಮೂಲ ಸೌಕರ್ಯಗಳ ಅವಶ್ಯಕತೆಯನ್ನು ಪೂರೈಸುವಲ್ಲಿ ಸಹಾಯವಾಗಲು ಸರ್ಕಾರದ ಈ ಆರ್ಥಿಕ ಸಹಾಯವನ್ನು ಹೆಚ್ಚಿಸಲು ಕೋರಿರುತ್ತಾರೆ ಮತ್ತು ಅಲ್ಪಸಂಖ್ಯಾತರಿಂದ ಮಂತ್ರಿಗಳಿಗೆ ಮತ್ತು ಸಂಸದ ಸದಸ್ಯರಿಗೂ ಕೂಡ ಆರ್ಥಿಕ ಸಹಾಯ ಹೆಚ್ಚಿಸುವ ಬಗ್ಗೆ ಮನವಿಗಳು ಸ್ವೀಕೃತವಾಗಿರುತ್ತವೆ.

ಅಧಿಕಾರಯುಕ್ತ ಸಮಿತಿಯು ಮೇಲೆ (2)ರಲ್ಲಿ ಓದಲಾದ ಸಭೆಯಲ್ಲಿ ಈ ವಿಷಯವನ್ನು ಚರ್ಚಿಸಿ ಜಿಲ್ಲಾ ಮತ್ತು ಇತರೆ ಸ್ಥಳಗಳಲ್ಲಿ ಕಟ್ಟಡದ ನಿರ್ಮಾಣದ ಖರ್ಚು ಮತ್ತು ಪ್ರಚಲಿತ ನಿವೇಶನಗಳ ಬೆಲೆ ಹೆಚ್ಚಳವಾಗಿರುವ ಪರಿಸ್ಥಿತಿಯನ್ನು ಪರಿಗಣಿಸಿ, ಪ್ರಸಕ್ತ ಸಾಲಿನಿಂದ ಸದರಿ ಆರ್ಥಿಕ ಸಹಾಯವನ್ನು ಪ್ರತಿ ಪ್ರಸ್ತಾವನೆಗೆ ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ರೂ.50.00 ಲಕ್ಷಗಳಿಗಿಂತ ಮತ್ತು ಇತರೆ ಕೇಂದ್ರಗಳಲ್ಲಿ ರೂ.20.00 ಲಕ್ಷಗಳಿಗಿಂತ ಕಮ್ಮಿ ಇರಕೂಡದೆಂಬ ಮಿತಿಯನ್ನು ನಿಗದಿಪಡಿಸಿರುತ್ತಾರೆ. ಈ ಅನುದಾನವನ್ನು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ ಸಂಖ್ಯೆ:2225-03-277-2-48 (ಯೋಜನೆ) ಅಡಿಯಲ್ಲಿ ಒದಗಿಸಿರುವ ಮೊತ್ತದಿಂದ ಹೊರಡಿಸಬಹುದಾಗಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಸಕಇ 91 ಅಸಂಯೋ 2006, ಬೆಂಗಳೂರು, ದಿನಾಂಕ:17ನೇ ಜುಲೈ, 2006

ಅಲ್ಪಸಂಖ್ಯಾತರ ಶಾದಿಮಹಲ್ ಸಮುದಾಯ ಭವನ ಯೋಜನೆಯ ಬಗ್ಗೆ ಪರಿಶೀಲಿಸಲಾಗಿ, ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಖ್ ಜನಾಂಗದವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಸದರಿ ಜನಾಂಗಕ್ಕೆ ಸೇರಿದ ಖಾಸಗಿ ಸಂಘ ಸಂಸ್ಥೆಗಳು ಅವರ ಅನುಕೂಲಕ್ಕಾಗಿ ಶಾದಿಮಹಲ್/ ಸಮುದಾಯ ಭವನಗಳನ್ನು ನಿರ್ಮಿಸಲು ಉದ್ದೇಶಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಲ್ಲಿ ಅಂತಹ ಸಂಘ ಸಂಸ್ಥೆಗಳಿಗೆ ಶಾದಿಮಹಲ್/ ಸಮುದಾಯ ಭವನಗಳ ನಿರ್ಮಾಣಕ್ಕಾಗಿ ಗರಿಷ್ಠ ಮಿತಿ ಜಿಲ್ಲಾ ಕೇಂದ್ರಗಳಲ್ಲಿ ರೂ.50.00 ಲಕ್ಷಗಳಿಗೆ ಮೀರದಂತೆ ಮತ್ತು ಇತರೆ ಸ್ಥಳಗಳಲ್ಲಿ ರೂ.20.00 ಲಕ್ಷಕ್ಕೆ ಮೀರದಂತೆ ಮತ್ತು ಇತರೆ ಸ್ಥಳಗಳಲ್ಲಿ ರೂ.20.00 ಲಕ್ಷಕ್ಕೆ ಮೀರದಂತೆ ಅನುದಾನ ಮಂಜೂರು ಮಾಡುವ ಕಾರ್ಯಕ್ರಮಕ್ಕೆ ಈ ಕೆಳಕಂಡ ಷರತ್ತುಗಳನ್ನೊಳಪಟ್ಟು ಸರ್ಕಾರ ಮಂಜೂರಾತಿ ನೀಡಿದೆ ಹಾಗೂ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಈ ದಿನಾಂಕದಿಂದ ರದ್ದುಪಡಿಸಲಾಗಿದೆ.

1. ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ ಶಾದಿಮಹಲ್/ ಸಮುದಾಯ ಭವನಗಳ ನಿರ್ಮಾಣದ ಅಂದಾಜಿನ ಮೊತ್ತವು ರೂ.50.00 ಲಕ್ಷಗಳಿಗಿಂತ ಕಡಿಮೆ ಇರಕೂಡದು ಮತ್ತು ಸರ್ಕಾರದ ಆರ್ಥಿಕ ಸಹಾಯವು (ಅನುದಾನ) ಕಟ್ಟಡದ ಪ್ರಸ್ತಾವನೆಯ ಶೇಕಡಾ 50ಕ್ಕೆ ಸೀಮಿತಗೊಳಿಸಲಾಗಿದೆ. ಯಾವುದೇ ಪ್ರಕರಣದಲ್ಲಿ ರೂ.50.00 ಲಕ್ಷಗಳಿಗಿಂತ ಹೆಚ್ಚಾಗಿ ಸರ್ಕಾರಿ ಅನುದಾನ ನೀಡಲಾಗುವುದಿಲ್ಲ.

2. ಜಿಲ್ಲಾ ಕೇಂದ್ರೇತರ ಸ್ಥಾನಗಳಲ್ಲಿ ಶಾದಿಮಹಲ್/ ಸಮುದಾಯ ಭವನಗಳ ನಿರ್ಮಾಣದ ಅಂದಾಜಿನ ಮೊತ್ತವು ರೂ.20.00 ಲಕ್ಷಗಳಿಗಿಂತ ಕಡಿಮೆ ಇರಕೂಡದು ಮತ್ತು ಸರ್ಕಾರದ ಆರ್ಥಿಕ ಸಹಾಯವು (ಅನುದಾನ) ಕಟ್ಟಡದ ಪ್ರಸ್ತಾವನೆಯ ಶೇಕಡಾ 50ಕ್ಕೆ ಸೀಮಿತಗೊಳಿಸಲಾಗಿದೆ. ಯಾವುದೇ ಪ್ರಕರಣದಲ್ಲಿ ರೂ.20.00 ಲಕ್ಷಗಳಿಗಿಂತ ಹೆಚ್ಚಾಗಿ ಸರ್ಕಾರಿ ಅನುದಾನ ನೀಡಲಾಗುವುದಿಲ್ಲ.
3. ಯೋಜನೆಯ ನಕಾಶೆ ಮತ್ತು ಅಂದಾಜು ಮೊತ್ತವನ್ನು ನೊಂದಾಯಿತ ಅಭಿಯಂತರರು (Registered Engineer)/ ದೃಢೀಕೃತ ಅಭಿಯಂತರರು (Certified Engineer)/ ಅನುಮೋದಿತ ಮೌಲ್ಯಮಾಪನಕಾರ (Approved valuer) ಪರವಾನಿಗೆ ಪಡೆದ ಅಭಿಯಂತರರು (Licensed Engineer) ಅಥವಾ ಜಿಲ್ಲಾ ಪಂಚಾಯತ್ತಿನ ಇಂಜಿನಿಯರಿಂಗ್ ಡಿಪಾರ್ಟ್‌ಮೆಂಟ್ ಅಥವಾ ಲೋಕೋಪಯೋಗಿ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ದಕ್ಷ ಸರ್ಕಾರಿ ಅಭಿಯಂತರರು ಇವರುಗಳು ದಾಖಲಾತಿಗಳನ್ನು ಪರಿಶೀಲಿಸಿ ದೃಢೀಕರಿಸಬೇಕಾಗಿರುತ್ತದೆ.
4. ಶಾದಿಮಹಲ್/ ಸಮುದಾಯ ಭವನ ಯೋಜನೆಯು ಒಂದು ಆದರ್ಶ ನಮೂನೆಗೆ ಅನುರೂಪವಾಗಿ, ಸಾರ್ವಜನಿಕ ಸಭೆಗಳಿಗೆ ಮುಖ್ಯವಾಗಿ ಮದುವೆ ಕಾರ್ಯಗಳನ್ನು ನಿರ್ವಹಿಸಲು ಬೇಕಾಗುವ ಎಲ್ಲಾ ಸೌಕರ್ಯಗಳನ್ನು ಹೊಂದಿರಬೇಕು, ಅಂದರೆ ಅಂತಹ ಕಾರ್ಯಗಳಿಗೆ ಬೇಕಾಗಿರುವ ಸಾಕಷ್ಟು ಕೊಠಡಿಗಳು, ಶೌಚಾಲಯಗಳು, ಸ್ನಾನದ ಕೊಠಡಿಗಳು, ಲಾಕರುಗಳು ಆದರ್ಶ ಪರಿಣಾಮದ ಅಡುಗೆ ಕೊಠಡಿಗಳು ಮತ್ತು ವಾಹನಗಳನ್ನು ನಿಲ್ಲಿಸಲು ಸಾಕಷ್ಟು ಸ್ಥಳವನ್ನು (Parking Space) ಹೊಂದಿದ್ದು, ಕೊನೆಯ ಪಕ್ಷ 500 ಮಂದಿಗಳಿಗೆ ಸಾಕಾಗುವ ಹಾಲ್ ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ಮತ್ತು 200 ಮಂದಿಗಳಿಗೆ ಸಾಕಾಗುವ ಹಾಲ್‌ಗಳು ಇತರೆ ಕೇಂದ್ರಗಳಲ್ಲಿ ಇರತಕ್ಕದ್ದು.
5. ಶಾದಿಮಹಲ್/ ಸಮುದಾಯ ಭವನಗಳನ್ನು ವಾಣಿಜ್ಯ ಮತ್ತು ವಾಣಿಜ್ಯೇತರ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳಬಹುದು. ವಾಣಿಜ್ಯೇತರ ಉದ್ದೇಶಕ್ಕೆ ಹಾಗೂ ಇತರೆ ಸಾಮಾಜಿಕ ಸಮಾರಂಭಗಳು ಸೇರಿ ಉಪಯೋಗಿಸಿಕೊಳ್ಳಬಹುದಾಗಿದೆ. ವಾಣಿಜ್ಯೇತರ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುವ ಸಮಾರಂಭಗಳಿಗೆ ಸಮಂಜಸವಾದ ಬಾಡಿಗೆಯನ್ನು ನಿಗದಿಪಡಿಸಬೇಕಾಗಿದೆ. ಶಾದಿಮಹಲ್/ ಸಮುದಾಯ ಭವನಗಳ ಆಡಳಿತ ಮಂಡಳಿಯು ಬಾಡಿಗೆ ನಿಗದಿಪಡಿಸುವುದನ್ನು ಜಿಲ್ಲಾಧಿಕಾರಿಗಳಿಂದ ಕಡ್ಡಾಯವಾಗಿ ಅನುಮೋದಿಸಲ್ಪಡಿಸಿಕೊಳ್ಳತಕ್ಕದ್ದು. ಶಾದಿಮಹಲ್/ ಸಮುದಾಯ ಭವನಗಳ ಬಾಡಿಗೆ ದರವನ್ನು ಪರಿಷ್ಕೃತಗೊಳಿಸಿ ಬೇಕಾದಲ್ಲಿಯೂ ಸಹ ಜಿಲ್ಲಾಧಿಕಾರಿಗಳ ಅನುಮೋದನೆ ಪಡೆಯತಕ್ಕದ್ದು.
6. ಈ ಕಾರ್ಯಕ್ರಮದಡಿಯಲ್ಲಿ ಅನುದಾನ ಪಡೆಯಲು ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರ ಸ್ವಯಂ ಸೇವಾ ಸಂಸ್ಥೆಗಳು: ಸಂಘಗಳು ಮಾತ್ರ ಅರ್ಹವಾಗಿರುತ್ತದೆ.
7. ಅನುದಾನ ಪಡೆಯುವ ಸಂಸ್ಥೆಗಳು ರಾಜ್ಯದಲ್ಲಿ ಪಕ್ಷ ಮಂಡಳಿಯಿಂದ: ನೊಂದಾಯಿತ ಸಂಸ್ಥೆಗಳಾಗಿರಬೇಕು, ನೋಂದಾಯಿತರ ದಿನಾಂಕದಿಂದ ಈ ಸಂಸ್ಥೆಗಳು ಕನಿಷ್ಠ ಮೂರು ವರ್ಷಗಳಿಂದ ಪ್ರಚಲಿತವಾಗಿರಬೇಕು.
8. ಅನುದಾನ ಬಯಸುವ ಸ್ವಯಂ ಸೇವಾ ಸಂಸ್ಥೆಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ತಮ್ಮ ಹೆಸರಿನಲ್ಲಿ ಎಲ್ಲಾ ದಾಖಲೆಗಳನ್ನು ಹೊಂದಿರಬೇಕು.
9. ಅನುದಾನವನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಬಿಡುಗಡೆ ಮಾಡತಕ್ಕದ್ದು. ಜಿಲ್ಲಾಧಿಕಾರಿಗಳು ಅನುದಾನವನ್ನು ಸಂಸ್ಥೆಗಳಿಗೆ ಮರು ಬಿಡುಗಡೆ ಮಾಡುವ ಮುನ್ನ ಕಟ್ಟಡದ ಪ್ರಗತಿಯನ್ನು ಆಧರಿಸಿ ಬಿಡುಗಡೆ ಮಾಡತಕ್ಕದ್ದು.
10. ಸಮುದಾಯ ಭವನ: ಶಾದಿಮಹಲ್ ಕಟ್ಟಡ ಕಾಮಗಾರಿಯನ್ನು ಮೊದಲನೇ ಕಂತಿನ ಅನುದಾನ ಪಡೆದ ದಿನಾಂಕದಿಂದ ಎರಡು ವರ್ಷಗಳೊಳಗಾಗಿ ಪೂರ್ಣಗೊಳಿಸತಕ್ಕದ್ದು.
11. ಈ ರೀತಿ ನಿರ್ಮಿಸಲಾದ ಸಮುದಾಯ ಭವನ: ಶಾದಿಮಹಲನ್ನು ರಾಜಕೀಯ ಚಟುವಟಿಕೆಗಳಿಗೆ ಉಪಯೋಗಿಸಬಾರದು.

ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಜಿಲ್ಲಾ ಅಧಿಕಾರಿಗಳಿಂದ ಬರುವ ಅರ್ಜಿಗಳನ್ನು ಪರಿಶೀಲಿಸಿ ತಮ್ಮ ಶಿಫಾರಸ್ಸಿನೊಂದಿಗೆ ಅನುಮೋದನೆ ಮತ್ತು ಹಣ ಬಿಡುಗಡೆಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:04.07.2006ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯ ನಿರ್ಣಯದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎ. ಜಾವಿದ್**

ಪಿ.ಆರ್. 1120

ಸರ್ಕಾರದ ಅಧೀನ ಕಾರ್ಯದರ್ಶಿ-3 (ಪ್ರ),
ಸಮಾಜ ಕಲ್ಯಾಣ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಗುಲ್ಬರ್ಗಾ ಚಿತ್ತಾಪುರ ತಾಲ್ಲೂಕು ಗುಂಡಗುರ್ತಿ-ಶಂಕರವಾಡಿ ರಸ್ತೆ ಹಾಗೂ ಗುಲ್ಬರ್ಗಾ-ಹಾಗರಗಾ-ಹೆಬ್ಬಾಳ-ಚಿಂಚೋಳಿ (ಹೆಚ್) ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರ ಪತ್ರಸಂಖ್ಯೆ: ಸಿಬಿಎನ್:ಹೈಆಸೆ:ರಸ್ತೆ ಮೇಲ್ದರ್ಜೆ:ಕಸಂ-2:05-06:7442 ಇವರ ಪತ್ರ ಸಂಖ್ಯೆ:ಮುಇಂ:ಸಂಕದ:ಸಇಂ-7:2004-05, ದಿನಾಂಕ:22.10.2005.

2. ಚಿತ್ತಾಪುರ ಕ್ಷೇತ್ರದ ಶಾಸಕರ ಪತ್ರಸಂಖ್ಯೆ: ಶಾಸಕರು/ ಚಿತ್ತಾಪುರ/ 2005-06, ದಿನಾಂಕ:07.07.2006.
3. ದಿನಾಂಕ:25.07.2006ರ ಕಾರ್ಯನಿರ್ವಾಹಕ ಅಭಿಯಂತರರು, ಲೋಇ ವಿಭಾಗ, ಗುಲ್ಬರ್ಗಾ ಇವರ ಫ್ಯಾಕ್ಸ್ ಮೂಲಕ ಸಲ್ಲಿಸಿರುವ ಪ್ರಸ್ತಾವನೆ.

**ಪ್ರಸ್ತಾವನೆ:**

ದಿನಾಂಕ:22.10.2005 ಉಲ್ಲೇಖಿತ (1)ರ ಪತ್ರದಲ್ಲಿ ಡಾ: ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯನ್ನಾಧರಿಸಿ ಮತ್ತು ತಾಲ್ಲೂಕು ಭೌಗೋಳಿಕ ಆಧಾರದ ಮೇಲೆ ಸೂಕ್ತ ಪ್ರಾಧಾನ್ಯತೆಯನ್ನು ನೀಡಿ ಹಿಂದುಳಿದ ತಾಲ್ಲೂಕುಗಳನ್ನು ಗಣನೆಗೆ ತೆಗೆದುಕೊಂಡು ಉತ್ತರ ವಲಯದ ಅಧೀನದಲ್ಲಿ ಬರುವಂತಹ ಗ್ರಾಮೀಣ ರಸ್ತೆ ಹಾಗೂ ಇತರೆ ಜಿಲ್ಲಾ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ವಿಧಾನ ಸಭಾ ಕ್ಷೇತ್ರವಾರು ಒಟ್ಟು 1136 ರಸ್ತೆಗಳಿಗೆ 9663:81 ಕಿಮೀ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರು ಕ್ರೋಡಿಕೃತ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖಿತ (2)ರ ದಿನಾಂಕ:07.07.2006 ರಂದು ಚಿತ್ತಾಪುರ ಮತಕ್ಷೇತ್ರ (ಗುಲ್ಬರ್ಗಾ ಜಿಲ್ಲೆ) ಶಾಸಕರು ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರಿಗೆ ಬರೆದ ಪತ್ರದಲ್ಲಿ ಚಿತ್ತಾಪುರ ತಾಲ್ಲೂಕಿನ ಗುಂಡಗುರ್ತಿ-ಶಂಕರವಾಡಿ ರಸ್ತೆ ಹಾಗೂ ಗುಲ್ಬರ್ಗಾ-ಹಾಗರಗ-ಹೆಬ್ಬಾಳ-ಚಿಂಚೋಳಿ ಎರಡೂ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಮನವಿಯ ಬಗ್ಗೆ ಪರಿಶೀಲಿಸಿ ಮನವಿಯಲ್ಲಿ ನಮೂದಿಸಲಾದ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಸಂಬಂಧ ಅಗತ್ಯ ಕ್ರಮ ತೆಗೆದುಕೊಳ್ಳುವಂತೆ ಲೋಕೋಪಯೋಗಿ ಇಲಾಖೆ ಸಚಿವರು ಸೂಚಿಸಿರುತ್ತಾರೆ.

ಉಲ್ಲೇಖಿತ (3)ರ ದಿನಾಂಕ:25.07.2006ರ ಪ್ರಸ್ತಾವನೆಯಲ್ಲಿ ಚಿತ್ತಾಪುರ ತಾಲ್ಲೂಕಿನ ಗುಲ್ಬರ್ಗಾ ವರ್ತುಲ ರಸ್ತೆ ಚಿಂಚೋಳಿ ತಾಂಡಾ ವಯಾ ಹಾಗರಗಿ ನ್ಯೂಹೆಬ್ಬಾಳ-ಚಿಂಚೋಳಿ ರಸ್ತೆಯ ಒಟ್ಟು 29.00 ಕಿ.ಮೀ. ಹಾಗೂ ಚಿತ್ತಾಪುರ ತಾಲ್ಲೂಕಿನ ಗುಂಡಗೂರ್ತಿಯಿಂದ ಶಂಕರವಾಡಿ ರಸ್ತೆ (ವಯಾ ಬೆಳಗುಂಪಾ (ಬಿ) ಬಾಗೋಡಿ ಕದರಗಿ ಹವಣಗಿ ರಸ್ತೆಯ ಒಟ್ಟು 23.00 ಕಿ.ಮೀ. ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಮಾರ್ಪಾಡಿಸಿದ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಲೋಕೋಪಯೋಗಿ ಇಲಾಖೆ ಸಚಿವರ ಸೂಚನೆಯ ಮೇರೆಗೆ ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ರವರ ಶಿಫಾರಸ್ಸಿನ ಅನ್ವಯ ಸದರಿ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 187 ಸಿಆರ್‌ಎಂ 2006, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ರಸ್ತೆಯ ಹೆಸರು | ಕಿ.ಮೀ. ಉದ್ದ |
|---|---|---|---|
| 1. | ಚಿತ್ತಾಪುರ | ಗುಲ್ಬರ್ಗಾ ವರ್ತುಳ ರಸ್ತೆಯಿಂದ ಚಿಂಚೋಳಿ ತಾಂಡಾ ವಯಾ ಹಾಗರಗಿ ನ್ಯೂ ಹೆಬ್ಬಾಳ-ಚಿಂಚೋಳಿ ರಸ್ತೆ ಕಿ.ಮೀ.0.00 ರಿಂದ 29.00 | 29-00 |
| 2. | ಗುಲ್ಬರ್ಗಾ | ಗುಂಡಗೂರ್ತಿಯಿಂದ ಶಂಕರವಾಡಿ ರಸ್ತೆ (ವಯಾ ಬೆಳಗುಂಪಾ(ಬಿ) ಬಾಗೋಡಿ ಕದರಗಿ ಜಿವಣಗಿ) ಕಿ.ಮೀ.0.00 ರಿಂದ 23.00 | 23-00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 1123

**ಸೇರ್ಪಡೆ**

**ಸಂಖ್ಯೆ: ಲೋಇ 320 ಸೇಸಏ 2004, ಬೆಂಗಳೂರು, ದಿನಾಂಕ:22ನೇ ಜುಲೈ, 2006**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ:27.04.1978ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ: ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರಿವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ ಶ್ರೀ ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:11.04.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ಪ್ರಕಟಿಸಲಾಗಿದೆ.

ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಇಂಜಿನಿಯರುಗಳು ಭಾರತ ಸಂವಿಧಾನದ 85ನೇ ತಿದ್ದುಪಡಿಯನ್ನು ಪ್ರಶ್ನಿಸಿ ಭಾರತದ ಸರ್ವೋನ್ನತ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲು ಮಾಡಿದ್ದು, ಆ ಅರ್ಜಿಗಳಲ್ಲಿ ದಿನಾಂಕ:08.04.2002ರಂದು ಕೆಳಕಂಡಂತೆ ಮಧ್ಯಂತರ ಆದೇಶವನ್ನು ನೀಡಿದೆ:

"A question of Constitutional law arises. It is, therefore appropriate that these petitions should be heard by a Constitution Bench.

In so far interim relief is concerned, the respondents shall not revert the petitioners nor affect their standing in the seniority list and promotion, pay etc. At the same time, it shall be open to the respondents to promote those who are benefited by the impugned amendement but so that it does not affect the petitioners in any manner and subject to the result of the writ petitions."

ಮೇಲ್ಕಂಡ ಆದೇಶವನ್ನು ಅನುಸರಿಸಿ, ರಿಟ್ ಅರ್ಜಿದಾರರುಗಳ ಸೇವಾ ಜೇಷ್ಠತೆಯನ್ನು ಸಂರಕ್ಷಿಸಿ ಅವರುಗಳ ಜೇಷ್ಠತೆಯನ್ನು ಡಾಲರ್ ಚಿಹ್ನೆಯನ್ನು ತೋರಿಸುವ ಮೂಲಕ ಸಂವಿಧಾನ ಪೀಠದ ಮುಂದೆ ಇತ್ಯರ್ಥವಾಗುವ ತೀರ್ಪಿಗೆ ಅನುಸಾರವಾಗಿ ಪುನರ್ ಪರಿಷ್ಕರಣೆಗೆ ಒಳಪಟ್ಟು ತಾತ್ಕಾಲಿಕವಾಗಿ ನಿಗದಿಪಡಿಸಲಾಗಿದೆ. ಶ್ರೀ ಮಹೇಶ್ ಎಂ. ಹಿರೇಮಠ, ರವರೂ ಸಹ ಸದರಿ ರಿಟ್ ಅರ್ಜಿಗಳಲ್ಲಿ ಒಬ್ಬ ಅರ್ಜಿದಾರರಾಗಿದ್ದರಿಂದ, ದಿನಾಂಕ:11.04.2002 ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಅವರ ಜೇಷ್ಠತೆಯನ್ನು ಸಾಮಾನ್ಯ ವರ್ಗ ಕ್ರಮಸಂಖ್ಯೆ: 1331ರಲ್ಲಿ, ಸಹಾಯಕ ಇಂಜಿನಿಯರ್ ವೃಂದದಲ್ಲಿ ಅವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಠ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ ರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿ ಪ್ರತಿಬಿಂಬಿಸಲಾಗಿದೆ. ಈ ಜೇಷ್ಠತೆಯನ್ನು ಆಧರಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 88 ಎಸ್‌ಪಿಜಿ 2002 ದಿನಾಂಕ:19.04.2002ರಲ್ಲಿ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಲಾಗಿದೆ.

ಈಗ ಶ್ರೀ ಮಹೇಶ್ ಎಂ. ಹಿರೇಮಠ ರವರು ತಾವು ಬೇಡ ಜಂಗಮ ಜಾತಿಗೆ ಸೇರಿದ್ದು, ಸಮಾಜ ಕಲ್ಯಾಣ ಇಲಾಖೆಯು ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 66 ಬಿಸಿಎ 86 ದಿನಾಂಕ:13.10.1986ರಲ್ಲಿ ಬೇಡ ಜಂಗಮ ಜಾತಿಯನ್ನು ಪರಿಶಿಷ್ಟ ಜಾತಿಯಡಿ ಸೇರಿಸಿ ಆದೇಶ ಹೊರಡಿಸಿರುವುದರಿಂದ, ತಮ್ಮನ್ನು ಪರಿಶಿಷ್ಟ ಜಾತಿಗೆ ಸೇರಿದವರೆಂದು ಪರಿಗಣಿಸಿ, ಅದರಂತೆ ಲಭ್ಯವಾಗುವ ಮುಂಬಡ್ತಿ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ. ಸಮಾಜ ಕಲ್ಯಾಣ ಇಲಾಖೆಯ ಸುತ್ತೋಲೆ ಸಂಖ್ಯೆ: ಎಸ್‌ಡಬ್ಲ್ಯೂ 132 ಎಸ್‌ಎಡಿ 97 ದಿನಾಂಕ:08.02.2000ದಲ್ಲಿ, ಸೂಚಿಸಿದಂತೆ ಜಿಲ್ಲಾ ಮಟ್ಟದ ಜಾತಿ ಪರಿಶೀಲನಾ ಸಮಿತಿಯಿಂದ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಒದಗಿಸಿದ್ದು, ಅದರಂತೆ ಇವರು ಪರಿಶಿಷ್ಟ ಜಾತಿಯಡಿಯಲ್ಲಿ ಬರುವ ಬೇಡ ಜಂಗಮ ಜಾತಿಗೆ ಸೇರಿದವರಾಗಿರುತ್ತಾರೆ. ದಿನಾಂಕ:11.04.2002ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಇವರು ಮಾನ್ಯ ಸರ್ವೋನ್ನತ ನ್ಯಾಯಾಲಯದ ಮಧ್ಯಂತರ ತೀರ್ಪಿನನ್ವಯ ರಕ್ಷಿತ ಅರ್ಜಿದಾರರು (ಡಾಲರ್ ಚಿಹ್ನೆ) ಎಂದು ಪರಿಗಣಿಸಿ, ಇವರ ಜೇಷ್ಠತೆಯನ್ನು ಸಾಮಾನ್ಯ ವರ್ಗ ಕ್ರಮಸಂಖ್ಯೆ:1331ರಲ್ಲಿ ಸಹಾಯಕ ಇಂಜಿನಿಯರ್ ವೃಂದದಲ್ಲಿ ಅವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ, ರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿ ಪ್ರತಿಬಿಂಬಿಸಲಾಗಿರುವುದರಿಂದ, ಸದರಿ ವೃಂದದ ಜೇಷ್ಠತೆಯನ್ನು ಪುನರ್ ನಿಗದಿಪಡಿಸುವ ಅವಶ್ಯಕತೆ ಇರುವುದಿಲ್ಲ.

ಶ್ರೀ ಮಹೇಶ್ ಎಂ. ಹಿರೇಮಠ ರವರಿಗಿಂತ ಸೇವೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ ರವರಿಗೆ ದಿನಾಂಕ:10.12.1997 ರಂದು ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಿದ್ದು, ದಿನಾಂಕ:11.04.2002 ರಂದು ಪ್ರಕಟಿಸಲಾದ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಅವರಿಗೆ ಅರ್ಹತಾ ದಿನಾಂಕ:26.02.1999 ಲಭ್ಯವಾಗಿದೆ ಹಾಗೂ ಅವರ ಜೇಷ್ಠತೆಯನ್ನು ಕ್ರ.ಸಂ. 2006ರಲ್ಲಿ ಪ್ರತಿಬಿಂಬಿಸಲಾಗಿದೆ. ಈಗ ಇವರನ್ನು ಅನುಸರಿಸಿ, ಶ್ರೀ ಮಹೇಶ್ ಎಂ. ಹಿರೇಮಠ ರವರ ಜೇಷ್ಠತೆಯನ್ನು ದಿನಾಂಕ:11.04.2002ರ ಕಾರ್ಯಪಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡಿಸಿ ಪ್ರಕಟಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಶ್ರೀ ಮಹೇಶ್ ಎಂ. ಹಿರೇಮಠ, ರವರು ಪರಿಶಿಷ್ಟ ಜಾತಿಗೆ ಸೇರಿದ ಅಧಿಕಾರಿಯಾಗಿದ್ದು, ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ ರವರಿಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕ ಹಾಗೂ ದಿನಾಂಕ:11.04.2002ರಂದು ಪ್ರಕಟಿಸಲಾದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಲಭ್ಯವಾದ ಅರ್ಹತಾ ದಿನಾಂಕವನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಎಂ. ಹಿರೇಮಠ ರವರಿಗೆ ದಿನಾಂಕ:11.04.2002ರಂದು ಪ್ರಕಟಿಸಲಾದ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಜೇಷ್ಠತೆಯನ್ನು ನಿಗದಿಪಡಿಸಲು ಉದ್ದೇಶಿಸಲಾಗಿದೆ. ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 84 ಎಸ್‌ಪಿಜಿ 2002 ದಿನಾಂಕ:11.04.2002ರಲ್ಲಿ ಪ್ರಕಟಿಸಲಾಗಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ: 2006 ಮತ್ತು 2007 ನಡುವೆ ಕ್ರಮಸಂಖ್ಯೆ: 2006ಎ ನ್ನಾಗಿ ಕೆಳಕಂಡಂತೆ ಸೇರ್ಪಡೆ ಮಾಡಲು ಪ್ರಸ್ತಾಪಿಸಿದೆ.

**ಕಾರ್ಯಪಾಲಕ ಇಂಜಿನಿಯರ್ ಪದವೃಂದದ ದಿನಾಂಕ:11.04.2002ರ ಜೇಷ್ಠತಾ ಪಟ್ಟಿಯಲ್ಲಿ**

| Sl. No. | List No. | AEGrd No. | Name of the Engineer | SC/ ST | Date of Birth | Date of Promotion | Eligibility Date | Remarks |
|---|---|---|---|---|---|---|---|---|
| 2006A | 2 | 2933 | Mahesh M. Hiremath | SC | 03.04.56 | 19.04.2002 | 26.02.1999 | |

ಮೇಲ್ಕಂಡ ಕಾರ್ಯಪಾಲಕ ಇಂಜಿನಿಯರ್‌ರ ವೃಂದದಲ್ಲಿ ಅರ್ಹತಾ ದಿನಾಂಕ ಹಾಗೂ ಜೇಷ್ಠತಾ ಪಟ್ಟಿಗಳಲ್ಲಿ ಕ್ರಮಸಂಖ್ಯೆ: 2006ಎ ಆಗಿ ಸೇರ್ಪಡೆ ಮಾಡುವುದರಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ: ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಗಳೊಂದಿಗೆ ಈ ತಿದ್ದುಪಡಿಯು ಪ್ರಕಟವಾದ ದಿನಾಂಕದಿಂದ 15 ದಿನಗಳೊಳಗಾಗಿ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಪಿ.ಆರ್. 1125

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಮಲೈ ಮಹದೇಶ್ವರಸ್ವಾಮಿ ಬೆಟ್ಟದಲ್ಲಿ ವಾಣಿಜ್ಯ ಸಂಕೀರ್ಣ ನಿರ್ಮಿಸುವ ಕಾಮಗಾರಿ ಉಸ್ತುವಾರಿಗಾಗಿ ಸಮಿತಿ ನೇಮಕ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುಅಕಾ 2005 ದಿನಾಂಕ:26.10.2005.

2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಎನ್‌ಆರ್/1/ ಸಿಆರ್/ 555/ 2003-04, ದಿನಾಂಕ:08.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುಅಕಾ 2005 ದಿನಾಂಕ:26.10.2005ರಲ್ಲಿ ಶ್ರೀ ಮಲೆ ಮಹದೇಶ್ವರಸ್ವಾಮಿ ದೇವಾಲಯದ ವತಿಯಿಂದ ರೂ.340.00 ಲಕ್ಷಗಳ ವೆಚ್ಚದಲ್ಲಿ ವಾಣಿಜ್ಯ ಸಂಕೀರ್ಣ ಮಳಿಗೆ ನಿರ್ಮಿಸಲು ಧಾರ್ಮಿಕ ದತ್ತಿ ಆಯುಕ್ತರವರ ಅಧ್ಯಕ್ಷತೆಯಲ್ಲಿ 7 ಸದಸ್ಯರನ್ನೊಳಗೊಂಡ ಸಮಿತಿಯನ್ನು ಮೇಲ್ಕಂಡ ಅಭಿವೃದ್ಧಿ ಕಾಮಗಾರಿಯ ಉಸ್ತುವಾರಿಗಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು.

ಓದಲಾದ ಕ್ರಮಸಂಖ್ಯೆ: (2)ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರವರು ಉಸ್ತುವಾರಿ ಸಮಿತಿಯಲ್ಲಿ ಸದಸ್ಯರನ್ನಾಗಿ ಚಾಮರಾಜನಗರ ಜಿಲ್ಲಾಧಿಕಾರಿಗಳನ್ನು ಸೇರ್ಪಡೆಗೊಳಿಸಿ, ಸರ್ಕಾರದ ಆದೇಶ ಹೊರಡಿಸಲು ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುಅಕಾ 2006, ಬೆಂಗಳೂರು, ದಿನಾಂಕ:19ನೇ ಜೂನ್, 2006**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಧಾರ್ಮಿಕ ದತ್ತಿ ಆಯುಕ್ತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಮಲೆ ಮಹದೇಶ್ವರಸ್ವಾಮಿ ದೇವಾಲಯದ ವತಿಯಿಂದ ವಾಣಿಜ್ಯ ಸಂಕೀರ್ಣ ಮಳಿಗೆ ನಿರ್ಮಿಸಲು ತಯಾರಿಸಲಾದ ರೂ.340.00 ಲಕ್ಷಗಳ ಅಂದಾಜುಪಟ್ಟಿಗೆ ಸರ್ಕಾರವು ದಿನಾಂಕ:11.10.2005ರಲ್ಲಿ ತನ್ನ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಸದರಿ ಅಭಿವೃದ್ಧಿ ಕಾಮಗಾರಿಯ ಉಸ್ತುವಾರಿಗಾಗಿ ಹಾಗೂ

ಕಾಮಗಾರಿಗಳನ್ನು ಟೆಂಡರ್ ಕರೆದು ಬಿಲ್ ರೀತ್ಯಾ ಹಣ ಪಾವತಿ ಮಾಡಲು ಧಾರ್ಮಿಕ ದತ್ತಿ ಆಯುಕ್ತರವರ ಅಧ್ಯಕ್ಷತೆಯಲ್ಲಿ (1) ಮುಖ್ಯ ಅಭಿಯಂತರರು, ಕರ್ನಾಟಕ ಮುಖ್ಯ ಲೋಕಾಯುಕ್ತರ ಕಛೇರಿ, ಬೆಂಗಳೂರು, (2) ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಚಾಮರಾಜನಗರ, (3) ಮುಖ್ಯ ವಾಸ್ತು ಶಿಲ್ಪಿಗಳು, ಬೆಂಗಳೂರು, (4) ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆಯ ಒಬ್ಬ ಪ್ರತಿನಿಧಿ, (5) ಶ್ರೀ ಟಿ.ಡಿ. ಮನ್‌ಮೋಹನ್, ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು (6) ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಮಲೆ ಮಹದೇಶ್ವರಸ್ವಾಮಿ ದೇವಸ್ಥಾನ ಇವರುಗಳನ್ನು ಒಳಗೊಂಡ ಸಮಿತಿಯಲ್ಲಿ ಚಾಮರಾಜನಗರ ಜಿಲ್ಲಾಧಿಕಾರಿಗಳನ್ನು ಸಹ ಓರ್ವ ಸದಸ್ಯರನ್ನಾಗಿ ಸೇರ್ಪಡೆಗೊಳಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1132

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ)

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಶ್ರೀ ಎ. ರವೀಂದ್ರ, ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಯವರು, ಇವರನ್ನು ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಪಿಡಿ 95 ಎಸ್‌ಪಿಬಿ 2003 ದಿನಾಂಕ:27.10.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ರಾಜ್ಯ ಯೋಜನಾ ಮಂಡಳಿಯನ್ನು ಪುನರಚಿಸಲಾಗಿತ್ತು. ಈ ಮಂಡಳಿಗೆ ಶ್ರೀ ಡಿ.ಎಂ. ಸಾಲಿ, ವಕೀಲರು ಹಾಗೂ ಸರ್ಕಾರಿ ಮಾಜಿ ಮುಖ್ಯ ಸಚೇತಕರು ಇವರನ್ನು 2004ರಲ್ಲಿ ನೇಮಿಸಲಾಗಿತ್ತು. ಸದರಿಯವರು ರಾಜಿನಾಮೆಯನ್ನು ಸಲ್ಲಿಸಿದ್ದು, ಸದರಿ ರಾಜಿನಾಮೆಯನ್ನು ಸರ್ಕಾರ ಅಂಗೀಕಾರ ಮಾಡಿತ್ತು. ಈಗ ಡಾ: ಎ. ರವೀಂದ್ರ ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಯವರು, ಇವರನ್ನು ಯೋಜನಾ ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಿಸಲು ಸರ್ಕಾರದ ತೀರ್ಮಾನ ತೆಗೆದುಕೊಂಡಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 10 ಎಸ್‌ಪಿಬಿ 2005 (ಭಾ), ಬೆಂಗಳೂರು, ದಿನಾಂಕ:24ನೇ ಜುಲೈ, 2006**

ಡಾ: ಎ. ರವೀಂದ್ರ ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ ಇವರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಿಸಲಾಗಿದೆ. ನೇಮಕಾತಿ, ನಿಬಂಧನೆಗಳು ಮತ್ತು ಷರತ್ತುಗಳನ್ನು ನಂತರ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಮುನಿಯೆಲ್ಲಪ್ಪ**

ಪಿ.ಆರ್. 1134

ಸರ್ಕಾರದ ಜಂಟಿ ಕಾರ್ಯದರ್ಶಿ,

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘದ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:10.03.2004ರ ಸಂಖ್ಯೆ: ಇಡಿ 210 ಯುಆರ್‌ಸಿ 2004ರ ಸರ್ಕಾರಿ ಆದೇಶ.

2. ದಿನಾಂಕ:31.01.2006, ಸಂಖ್ಯೆ:F.SRO/NCTE/B.Ed/ 2005-06/5282ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ:11.05.2006ರ ಉಪಾಧ್ಯಕ್ಷರು, ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘ, ಬೆಂಗಳೂರು, ಇವರ ಪತ್ರ.

**ಪೀಠಿಕೆ:**

1. ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘದ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, 14ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-560 040 ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:31.01.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:11.05.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 76 ಯುಆರ್‌ಸಿ 2006, ಬೆಂಗಳೂರು, ದಿನಾಂಕ:19ನೇ ಜುಲೈ, 2006**

3. ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘದ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, 14ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-560 040, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್. 1135

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಫಾರ್ ಮ್ಯಾನ್‌ಪವರ್ ಪ್ಲಾನಿಂಗ್ ಅಂಡ್ ಕೆರಿಯರ್ ಟ್ರೈನಿಂಗ್‌ನ ಇಂಪ್ಯಾಕ್ಟ್ ಕಾಲೇಜ್ ಆಫ್ ಎಜುಕೇಷನ್ ಅಂಡ್ ಅಪ್ಲೈಡ್ ಸೈನ್ಸ್‌ಸ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:31.12.2003ರ ಸಂಖ್ಯೆ: ಇಡಿ 450 ಯುಆರ್‌ಸಿ 2003ರ ಸರ್ಕಾರದ ಪತ್ರ.

2. ದಿನಾಂಕ:03.02.2006, ಸಂಖ್ಯೆ:F.SRO/NCTE/B.Ed/ 2005-06/5337ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ:28.02.2006ರ ಪ್ರಾಚಾರ್ಯರು, ಇಂಪ್ಯಾಕ್ಟ್ ಕಾಲೇಜ್ ಆಫ್ ಎಜುಕೇಷನ್ ಅಂಡ್ ಅಪ್ಪೈಲ್ಡ್ ಸೈನ್ಸ್‌ಸ್, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1. ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಫಾರ್ ಮ್ಯಾನ್‌ಪವರ್ ಪ್ಲಾನಿಂಗ್ ಅಂಡ್ ಕೆರಿಯರ್ ಟ್ರೈನಿಂಗ್‌ನ ಇಂಪ್ಯಾಕ್ಟ್ ಕಾಲೇಜ್ ಆಫ್ ಎಜುಕೇಷನ್ ಅಂಡ್ ಅಪ್ಲೈಡ್ ಸೈನ್ಸ್‌ಸ್ ಸಹಕಾರನಗರ್ ಸೌತ್, ಬೆಂಗಳೂರು-560 092, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:03.02.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:28.02.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 47 ಯುಆರ್‌ಸಿ 2006, ಬೆಂಗಳೂರು, ದಿನಾಂಕ:19ನೇ ಜುಲೈ, 2006**

3. ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಫಾರ್ ಮ್ಯಾನ್‌ಪವರ್ ಪ್ಲಾನಿಂಗ್ ಅಂಡ್ ಕೆರಿಯರ್ ಟ್ರೈನಿಂಗ್‌ನ ಇಂಪ್ಯಾಕ್ಟ್ ಕಾಲೇಜ್ ಆಫ್ ಎಜುಕೇಷನ್ ಅಂಡ್ ಅಪ್ಲೈಡ್ ಸೈನ್ಸ್‌ಸ್ ಸಹಕಾರನಗರ ಸೌತ್, ಬೆಂಗಳೂರು-560 092, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್. 1136

## ಸಹಕಾರ ಸಚಿವಾಲಯ

**ವಿಷಯ:** ಶಿರಾ ತಾಲ್ಲೂಕು ದ್ವಾರಾಳು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಡಿ.ಎ.ವೈ.01/ ಜೆಎಂಸಿ/ 03/ 2006-07, ದಿನಾಂಕ:20.05.2006.

**ಪ್ರಸ್ತಾವನೆ:**

ಶಿರಾ ತಾಲ್ಲೂಕಿನ ದ್ವಾರಾಳು ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31ರಡಿ ದಿನಾಂಕ:31.08.2004ರಂದು ವಿಶೇಷಾಧಿಕಾರಿಯನ್ನು ಮಧುಗಿರಿ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ನೇಮಕ ಮಾಡಿದ್ದು ತದನಂತರ ದಿನಾಂಕ:01.03.2005 ರಿಂದ ದಿನಾಂಕ:30.09.2005ರ ವರೆಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸಲಾಗಿದೆ. ದಿನಾಂಕ:29.09.2005ರಂದು ಸಂಘದ ಚುನಾವಣೆಯನ್ನು ನಿಗದಿಪಡಿಸಿ ಚುನಾವಣಾ ಪ್ರಕ್ರಿಯೆಯನ್ನು ನಡೆಸಿದ್ದು, ಮತದಾನದಂದು ಮತದಾನ ಪೂರ್ವದಲ್ಲಿ ಮತ ಪತ್ರಗಳನ್ನು ಪ್ರತ್ಯೇಕವಾಗಿ ಸಾಮಾನ್ಯ ಸ್ಥಾನ, ಮಹಿಳಾ ಮೀಸಲು ಮತ್ತು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಸ್ಥಾನಗಳಿಗೆ ಮುದ್ರಿಸಿರುವ

ಕಾರಣ ಗಲಭೆ ಉಂಟಾಗಿ ಚುನಾವಣೆಯನ್ನು ಮುಂದೂಡಲಾಗಿರುತ್ತದೆ ಎಂದೂ ಈ ಮಧ್ಯೆ ವಿಶೇಷಾಧಿಕಾರಿಯ ಒಂದು ವರ್ಷ ಅವಧಿ ಮುಗಿದಿದ್ದರಿಂದ ದಿನಾಂಕ:01.10.2005ರಿಂದ ದಿನಾಂಕ:02.03.2006ರ ವರೆಗೆ ಅವಧಿಯನ್ನು ವಿಸ್ತರಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ರವರು ಆದೇಶ ಹೊರಡಿಸಿರುತ್ತಾರೆಂದು ತಿಳಿಸಿ ಆಡಳಿತ ಮಂಡಳಿಯ ಚುನಾವಣೆ ನಡೆಸಲು ಸಂಘದಲ್ಲಿ ಹಣಕಾಸು ಸಮಸ್ಯೆ ಇರುವುದರಿಂದ ದಿನಾಂಕ:03.02.2006ರಿಂದ ಆರು ತಿಂಗಳ ಅವಧಿಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಸಿಓ 114 ಸಿಎಲ್ಎಂ 2006, ಬೆಂಗಳೂರು, ದಿನಾಂಕ:29ನೇ ಜೂನ್, 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1)ನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಶಿರಾ ತಾಲ್ಲೂಕು ದ್ವಾರಾಳು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31ಉಪ ಪ್ರಕರಣ (1)ರಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಇಪ್ಪತ್ತನಾಲ್ಕು ತಿಂಗಳು" ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31 ಉಪ ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:02.09.2006ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31 ಉಪ ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 1137

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಅಣವೀರಪ್ಪ ಎಸ್. ಮುಗಳಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 9 ಎಸ್ಇಎನ್ 06, ಬೆಂಗಳೂರು, ದಿನಾಂಕ:18ನೇ ಜುಲೈ, 2006**

ಶ್ರೀ ಅಣವೀರಪ್ಪ ಎಸ್. ಮುಗಳಿ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಸೇಡಂ ತಾಲ್ಲೂಕಿನ ಭೂ ನ್ಯಾಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮುಧೋಳ ಗ್ರಾಮದ ಶ್ರೀ ನಾರಾಯಣ ರೆಡ್ಡಿ ಮತ್ತು ಕುಟುಂಬದವರು ಕರ್ನಾಟಕ ಭೂ ಸುಧಾರಣೆ ಕಾಯ್ದೆಯಡಿಯ ಪ್ರಕರಣದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ:20.09.94ರಂದು ನೀಡಿದ ತೀರ್ಪಿನಲ್ಲಿ ಘೋಷಣೆದಾರರು ತಪ್ಪು ಮಾಹಿತಿ ಪ್ರಸ್ತಾವನೆ ಸಲ್ಲಿಸಿದ್ದಲ್ಲಿ ಅದನ್ನು ಮರು ವಿಚಾರಣೆ ನಡೆಸಲು ಭೂ ನ್ಯಾಯ ಮಂಡಳಿ ಸೇಡಂ ರವರಿಗೆ ನಿರ್ದೇಶಿಸಿದಂತೆ ದಿನಾಂಕ:17.07.2002ರಂದು ಭೂ ನ್ಯಾಯ ಮಂಡಳಿಯು ಘೋಷಣೆದಾರರ ಒಟ್ಟು ಹಿಡುವಳಿ ಭೂ ಪರಿಮಿತಿ ಒಳಗಡೆ ಇರುವುದಾಗಿ ಈ ಹಿಂದೆ ಭೂ ನ್ಯಾಯ ಮಂಡಳಿಯು ಹೊರಡಿಸಿದ ಆದೇಶವನ್ನು ಪುನರುಚ್ಚರಿಸಿದ್ದು ಈ ಸಂಬಂಧ ಸ್ಪಷ್ಟ ಅಭಿಪ್ರಾಯ ನೀಡದೆ ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸದೇ ನಡತೆ ನಿಯಮಗಳನ್ನು ಉಲ್ಲಂಘಿಸಿರುವುದರ ಮೂಲಕ ಕರ್ತವ್ಯಲೋಪವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಅಣವೀರಪ್ಪ ಎಸ್. ಮುಗಳಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಣವೀರಪ್ಪ ಎಸ್. ಮುಗಳಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11, 11-ಎ ರಲ್ಲಿ ನಿಗದಿಪಡಿಸಿದ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

ಪಿ.ಆರ್. 1138

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ರಿಟ್ ಅರ್ಜಿ ಸಂಖ್ಯೆ: 1554-59/ 98ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪಿನ ಅನುಷ್ಠಾನ-ಮಾತಂ ಮತ್ತು ಜೈತಂ ನಿರ್ದೇಶನಾಲಯದಲ್ಲಿ ತಾತ್ಕಾಲಿಕವಾಗಿ ಸೃಜಿಸಿದ ಸಂಖ್ಯಾತಿರಿಕ್ತ (Supernumerary) ಹುದ್ದೆಗೆದುರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಸೇವೆಗಳಲ್ಲಿ ವಿಲೀನಗೊಳಿಸುವ ಕುರಿತು.

**ಓದಲಾಗಿದೆ:**
1. ರಿಟ್ ಅರ್ಜಿ ಕ್ರಮಾಂಕ 1554-59/ 98ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ನೀಡಿರುವ ತೀರ್ಪು ದಿನಾಂಕ:27.03.2002.
2. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2002 (1) ದಿನಾಂಕ:09.09.2003.
3. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2002 (2) ದಿನಾಂಕ: 10.09.2003.
4. ಸರ್ಕಾರಿ ಆದೇಶ ಸಂಖ್ಯೆ: ಸಇ 140 ಮಾಇಸೇ 2004 ದಿನಾಂಕ:25.01.2006.
5. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಅಧಿಕೃತ ಜ್ಞಾಪನ ಸಂಖ್ಯೆ: ಮಾತಂನಿ/ ಆಡಳಿತ-1/ ಸೂನ್ಯೂಹು/ 802/ 1054 ದಿನಾಂಕ:27.02.2006.
6. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ: ಮಾತಂನಿ/ ಆಡಳಿತ-1/ ಸೂನ್ಯೂಹು/ 03-04/ 353 ದಿನಾಂಕ:29.06.2006.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ದೂರ ಸಂವೇದಿ ತಂತ್ರಜ್ಞಾನ ಬಳಕೆ ಕೇಂದ್ರವನ್ನು ಕರ್ನಾಟಕ ದೂರ ಸಂವೇದಿ ಅನ್ವಯಿಕ ಕೇಂದ್ರವೆಂದು ಸ್ವಾಯತ್ತ ಸಂಸ್ಥೆಯಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಎಸ್‌ಟಿ 364 ಎಸ್‌ಟಿಎಸ್ 95 ದಿನಾಂಕ:29.11.96ರ ಅನುಸಾರ ಪರಿವರ್ತಿಸಿದಾಗ ಸದರಿ ಕೇಂದ್ರದ ಆಗಿನ ಆಸ್ತಿ, ಸಿಬ್ಬಂದಿ ಹಾಗೂ ಹುದ್ದೆಗಳು ಹೊಸ ಸ್ವಾಯತ್ತ ಸಂಸ್ಥೆಗೆ ವರ್ಗಾಯಿಸಲ್ಪಟ್ಟವು. ಹೀಗೆ ವರ್ಗಾವಣೆಗೊಂಡಾಗ ತಮ್ಮ ಒಪ್ಪಿಗೆ ಪಡೆದಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಸರ್ಕಾರಿ ಸೇವೆಯಲ್ಲೇ ಮುಂದುವರೆಸುವಂತೆ ಕೋರಿ ಈ ಕೆಳಕಾಣಿಸಿದ ನೌಕರರ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ರಿಟ್ ಅರ್ಜಿ ಕ್ರಮಾಂಕ:1554-1559/ 98ಗಳನ್ನು ಸಲ್ಲಿಸಿದ್ದರು.

1. ಶ್ರೀ ಎನ್. ಶಂಕರಯ್ಯ — ವಾಹನ ಚಾಲಕ
2. ಶ್ರೀ ಶ್ರೀನಿವಾಸ — ವಾಹನ ಚಾಲಕ
3. ಶ್ರೀಮತಿ ಬಿ.ಎಂ. ಸೊಣ್ಣಮ್ಮ — ಡಿ. ಗುಂಪು ನೌಕರರು
4. ಶ್ರೀ ಕೆ. ಮುನಿಯಪ್ಪ — ಡಿ. ಗುಂಪು ನೌಕರರು
5. ಶ್ರೀ ಬಿ.ಎನ್. ಚಿನ್ನಪ್ಪ — ಡಿ. ಗುಂಪು ನೌಕರರು
6. ಶ್ರೀ ಎನ್. ದಾಸಪ್ರಕಾಶ್ — ಡಿ. ಗುಂಪು ನೌಕರರು

ಈ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ (1)ರಲ್ಲಿ ಓದಲಾದ ದಿನಾಂಕ: 27.03.2002ರಂದು ತೀರ್ಪನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ:09.09.2003ರ ಸರ್ಕಾರಿ ಆದೇಶದ ಅನ್ವಯ ಸದರಿ ನೌಕರರನ್ನು ತತ್ಸಮಾನ ಹುದ್ದೆಗಳಲ್ಲಿ ವಿಲೀನಗೊಳಿಸುವ ನಿಟ್ಟಿನಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ಖಾಲಿ ಇದ್ದ ಕ್ರಮಬದ್ಧ ಎರಡು ಡಿ. ಗುಂಪು ಹುದ್ದೆಗಳೊಂದಿಗೆ ಎರಡು ಡಿ. ಗುಂಪು ಹಾಗೂ ಎರಡು ವಾಹನ ಚಾಲಕರ ಸಂಖ್ಯಾತಿರಿಕ್ತ ಹುದ್ದೆಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:09.09.2003ರ ಸರ್ಕಾರಿ ಆದೇಶದ ಅನ್ವಯ ತಾತ್ಕಾಲಿಕವಾಗಿ ಸೃಜಿಸಲಾಯಿತು.

ಈ ಹಿನ್ನೆಲೆಯಲ್ಲಿ ಸದರಿ ನೌಕರರನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ:10.09.2003ರ ಸರ್ಕಾರಿ ಆದೇಶ ಅನ್ವಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16ರ ಅನುಸಾರ ಸದರಿ ನೌಕರರನ್ನು ವರ್ಗಾಯಿಸಿ ನೇಮಿಸುವ ಮೂಲಕ ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಲಾಯಿತು.

| ಕ್ರಮ ಸಂಖ್ಯೆ | ನೌಕರರ ಹೆಸರು ಶ್ರೀ/ ಶ್ರೀಮತಿ | ಹುದ್ದೆಯ ಹೆಸರು |
|---|---|---|
| 1. | ಎನ್. ಶಂಕರಯ್ಯ, ವಾಹನ ಚಾಲಕರು. | ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2001 (1) ದಿನಾಂಕ:09.09.2003ರಲ್ಲಿ ಸೃಜಿಸಲಾದ ಸಂಖ್ಯಾತಿರಿಕ್ತ ವಾಹನ ಚಾಲಕರ ಹುದ್ದೆ. |
| 2. | ಶ್ರೀನಿವಾಸ, ವಾಹನ ಚಾಲಕರು. | ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2001 (1) ದಿನಾಂಕ:09.09.2003ರಲ್ಲಿ ಸೃಜಿಸಲಾದ ಸಂಖ್ಯಾತಿರಿಕ್ತ ವಾಹನ ಚಾಲಕರ ಹುದ್ದೆ. |
| 3. | ಬಿ.ಎಂ. ಸೊಣ್ಣಮ್ಮ ಡಿ. ಗುಂಪು ನೌಕರರು. | ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಖಾಲಿ ಇದ್ದ ಡಿ. ಗುಂಪು ಹುದ್ದೆ. |
| 4. | ಕೆ. ಮುನಿಯಪ್ಪ, ಡಿ. ಗುಂಪು ನೌಕರರು. | ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಖಾಲಿ ಇದ್ದ ಡಿ. ಗುಂಪು ಹುದ್ದೆ. |
| 5. | ಬಿ.ಎನ್. ಚಿನ್ನಪ್ಪ, ಡಿ. ಗುಂಪು ನೌಕರರು | ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2001 (1) ದಿನಾಂಕ:09.09.2003ರಲ್ಲಿ ಸೃಜಿಸಲಾದ ಸಂಖ್ಯಾತಿರಿಕ್ತ ಡಿ. ಗುಂಪು ಹುದ್ದೆ. |
| 6. | ಎನ್. ದಾಸಪ್ರಕಾಶ್, ಡಿ. ಗುಂಪು ನೌಕರರು. | ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2001 (1) ದಿನಾಂಕ:09.09.2003ರಲ್ಲಿ ಸೃಜಿಸಲಾದ ಸಂಖ್ಯಾತಿರಿಕ್ತ ಡಿ. ಗುಂಪು ಹುದ್ದೆ. |

ಮುಂದುವರೆದು ಮೇಲೆ (4)ರಲ್ಲಿ ಓದಲಾದ ದಿನಾಂಕ:25.01.2006ರ ಸರ್ಕಾರಿ ಆದೇಶದ ಅನ್ವಯ ಸರ್ಕಾರದ ಸಹಕಾರ ಇಲಾಖೆಯು ಈ ಕೆಳಕಂಡ ನೌಕರರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16ರ ಅನ್ವಯ ಕೃಷಿ ಮಾರಾಟ ಇಲಾಖೆಯಲ್ಲಿ ಖಾಲಿ ಇದ್ದ ಸಮಾನ ಹುದ್ದೆಗಳಿಗೆ ನೇಮಕ ಮಾಡಿ ಕೃಷಿ ಮಾರಾಟ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಲು ಅನುಮೋದನೆ ನೀಡಿದ್ದರ ಅನುಸಾರ ಮೇಲೆ (5)ರಲ್ಲಿ ಓದಲಾದ ದಿನಾಂಕ:27.02.2006ರ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಅಧಿಕೃತ ಜ್ಞಾಪನದಂತೆ ಈ ಕೆಳಕಂಡ ನೌಕರರನ್ನು ಕೃಷಿ ಮಾರಾಟ ಇಲಾಖೆಯಲ್ಲಿ ಕಾರ್ಯ ವರದಿ ಮಾಡಿಕೊಳ್ಳುವ ಸಲುವಾಗಿ ದಿನಾಂಕ:28.02.2006ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸದರಿ ನಿರ್ದೇಶನಾಲಯದ ಕಾರ್ಯವ್ಯಾಪ್ತಿಯಿಂದ ಬಿಡುಗಡೆಗೊಳಿಸಲಾಯಿತು.

1. ಶ್ರೀ ಎನ್. ಶಂಕರಯ್ಯ — ವಾಹನ ಚಾಲಕರು
2. ಶ್ರೀ ಶ್ರೀನಿವಾಸ — ವಾಹನ ಚಾಲಕರು
3. ಶ್ರೀ ಬಿ.ಎನ್. ಚಿನ್ನಪ್ಪ — ಡಿ. ಗುಂಪು ನೌಕರರು

ಈ ಹಿನ್ನೆಲೆಯಲ್ಲಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಮೇಲೆ (5)ರಲ್ಲಿ ಓದಲಾದ ದಿನಾಂಕ:29.06.2006ರ ತಮ್ಮ ಪತ್ರದಲ್ಲಿ ನಿರ್ದೇಶನಾಲಯದಲ್ಲಿ ಡಿ. ಗುಂಪು ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಕೆಂಚಯ್ಯ, ಇವರು ದಿನಾಂಕ:31.12.2005ರಂದು ವಯೋ ನಿವೃತ್ತಿ ಹೊಂದಿದ್ದು, ತೆರವಾಗಿರುವ ಸದರಿ ಡಿ. ಗುಂಪು ಹುದ್ದೆಯಲ್ಲಿ ಸಂಖ್ಯಾತಿರಿಕ್ತ ಡಿ. ಗುಂಪು ಹುದ್ದೆಗೆದುರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎನ್. ದಾಸಪ್ರಕಾಸ್, ಇವರನ್ನು ವಿಲೀನಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 06 ಇಸಂಸೇ 2002, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಡಿ. ಗುಂಪು ನೌಕರರಾದ ಶ್ರೀ ಕೆಂಚಯ್ಯ ಇವರು ದಿನಾಂಕ:31.12.2005ರಂದು ವಯೋ ನಿವೃತ್ತಿ ಹೊಂದಿದ್ದರಿಂದ, ತೆರವಾದ ಸದರಿ ಡಿ. ಗುಂಪು ಹುದ್ದೆಯಲ್ಲಿ ಶ್ರೀ ಎನ್. ದಾಸಪ್ರಕಾಶ್, ಇವರನ್ನು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16ರ ಅನುಸಾರ ಖಾಯಂ ಆಗಿ ವರ್ಗಾಯಿಸಿ ಸಾರ್ವಜನಿಕ ಸೇವಾ ಹಿತದೃಷ್ಟಿಯಿಂದ ನೇಮಿಸುವ ಮೂಲಕ ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1105 ಸೇ-I/ 2003 ದಿನಾಂಕ:26.08.2003, ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಎಲ್‌ಎಡ್ಲ್ಯೂ 820 ಒಪಿಎಸ್- III 2002 ದಿನಾಂಕ: 28.09.2002 ಹಾಗೂ ಸಿ ಮತ್ತು ಆಸು ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 2416 ಸೇನಿಎ 2002 ದಿನಾಂಕ:30.10.2002ರ ಅನ್ವಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಬಿ. ರೇಣುಕಾಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1139

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಜಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 144 ಬೆಂರೂಪ್ರಾ 2000, ದಿನಾಂಕ:15.03.2001.
2. ಮುಖ್ಯಾಧಿಕಾರಿ, ಪಟ್ಟಣ ಪಂಚಾಯ್ತಿ ಕಾರ್ಯಾಲಯ, ಜಗಳೂರು ಇವರ ಪತ್ರ ಸಂಖ್ಯೆ: ಪ.ಪಂ/ಯೋ.ಪ್ರಾ/ ಜಗ/ ಮ.ಯೋ/ 264/ 05-06, ದಿನಾಂಕ:16.03.2006.
3. ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು ಇವರ ಏಕ ಕಡತ ಸಂಖ್ಯೆ: ನಯೋ/ ಉನಿ(ಕೇಂ.ಕಾ)/ ಮಾ.ಪ್ಲಾನ್/ ತಾತ್ಕಾಲಿಕ/ ಜಗಳೂರು/ 112/ 2006-07, ದಿನಾಂಕ:15.06.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ದಾವಣಗೆರೆ ಜಿಲ್ಲೆ ಜಗಳೂರು ಪಟ್ಟಣ ಪಂಚಾಯ್ತಿಯ ವ್ಯಾಪ್ತಿಯನ್ನೇ ಸ್ಥಳೀಯ ಯೋಜನಾ ಪ್ರದೇಶವೆಂದು ಮತ್ತು ಯೋಜನಾ ಪ್ರಾಧಿಕಾರವೆಂದು ಘೋಷಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯಾಧಿಕಾರಿ, ಪಟ್ಟಣ ಪಂಚಾಯ್ತಿ ಕಾರ್ಯಾಲಯ, ಜಗಳೂರು ಇವರು ದಾವಣಗೆರೆ ಜಿಲ್ಲೆ, ಜಗಳೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ ನಕ್ಷೆ ಹಾಗೂ ವರದಿಯ ಯೋಜನೆಯನ್ನು ತಯಾರಿಸಿ ತಾತ್ಕಾಲಿಕ ಅನುಮೋದನೆಗೆ ನಗರ ಯೋಜನಾ ನಿರ್ದೇಶಕರಿಗೆ ಸಲ್ಲಿಸಿದ್ದಾರೆ.

2001ರ ಜನಗಣತಿಯಂತೆ ಜಗಳೂರು ಪಟ್ಟಣದ ಜನಸಂಖ್ಯೆ 14,744 ರಷ್ಟಿದ್ದು 20 ವರ್ಷಗಳ ಅವಧಿಗೆ ಅಂದರೆ, 2021ರ ವೇಳೆಗೆ ಜನಸಂಖ್ಯೆಯು 25,000 ಆಗಬಹುದೆಂದು ಅಂದಾಜಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಜಗಳೂರು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯು 580.00 ಹೆಕ್ಟೇರ್ ಇದ್ದು, ಜಗಳೂರು ಪಟ್ಟಣದ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಪರಿಚಲನೆ ವ್ಯವಸ್ಥೆಯ ಸಮಸ್ಯೆಯನ್ನು ವಿಶ್ಲೇಷಿಸಿ, ಯೋಜನಾ ತತ್ವ ಹಾಗೂ ಮಹಾ ಯೋಜನೆ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಪ್ರಕರಣ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ಪಟ್ಟಣದ ಮುಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗಾಗಿ ಬೇಕಾಗಬಹುದಾದ ಜಾಗಗಳನ್ನು ಕಾಯ್ದಿರಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ನಗರ ಯೋಜನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 79 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ:22ನೇ ಜುಲೈ, 2006**

ದಾವಣಗೆರೆ ಜಿಲ್ಲೆ, ಜಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಸರ್ಕಾರವು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ತಾತ್ಕಾಲಿಕ ಅನುಮೋದನೆಯನ್ನು ನೀಡಿದೆ.

**ಮಹಾ ಯೋಜನೆಯಲ್ಲಿ**

1. ಸ್ಥಳೀಯ ಯೋಜನಾ ಪ್ರದೇಶದ ನಕ್ಷೆಯಲ್ಲಿ ನಗರೀಕರಣ ಎಲ್ಲೆಯನ್ನು ಹಳದಿ ಮತ್ತು ವ್ಯವಸಾಯ ವಲಯವನ್ನು ಹಸಿರು ಬಣ್ಣಗಳಲ್ಲಿ ಗುರುತಿಸುವುದು.
2. ಉದ್ದೇಶಿತ ರಸ್ತೆ ಚಲನವಲನ ನಕ್ಷೆಯನ್ನು ನಗರ ಯೋಜನಾ ನಿರ್ದೇಶಕರ ಕಛೇರಿಯಿಂದ ಹೊರಡಿಸಿರುವ ಮಾರ್ಗದರ್ಶನದಂತೆ ತಯಾರಿಸತಕ್ಕದ್ದು.

**ವಲಯ ನಿಯಮಾವಳಿಯಲ್ಲಿ**

1. ವಲಯ ನಿಯಮಾವಳಿಯನ್ನು ನಗರ ಯೋಜನಾ ನಿರ್ದೇಶಕರ ಕಛೇರಿಯಿಂದ ಹೊರಡಿಸಿರುವ ಮಾದರಿ ವಲಯ ನಿಯಮಾವಳಿಯಂತೆ ತಯಾರಿಸುವುದು.
2. ವಲಯ ನಿಯಮಾವಳಿಯಲ್ಲಿ ಗುಂಪು ವಸತಿ ಯೋಜನೆ (Group housing) ಗಳ ಬಗ್ಗೆ ನಿಯಮಗಳನ್ನು ಪ್ರಸ್ತಾಪಿಸುವುದು.

ಜಗಳೂರು ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ನಕ್ಷೆ ಮತ್ತು ವರದಿಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1140

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀ ಎಸ್.ಎ. ಅಂಗಡಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಇಲಾಖೆ ಶ್ರೀ ಸಯ್ಯದ್ ವಜೀರ್ ಅಹಮದ್, ಅಧೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ನರಗುಂದ, ಗದಗ್ ಜಿಲ್ಲೆ ಅವರುಗಳನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ನಿಯೋಜನೆ ಮೇರೆಗೆ ನೇಮಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರಾ:ಕಾ:20: 2006-07, ದಿನಾಂಕ:15.07.2006.

**ಪ್ರಸ್ತಾವನೆ:**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:15.07.2006ರ ಪತ್ರದಲ್ಲಿ ಶ್ರೀ ಎಸ್.ಎ. ಅಂಗಡಿ, ಸಹಕಾರ ಅಭಿವೃದ್ಧಿ ಅಧಿಕಾರಿ (ಪ್ರಸ್ತುತ ಮಾರಾಟಾಧಿಕಾರಿ, ದಿ ನ್ಯಾಷನಲ್ ಕೋ ಆಪರೇಟೀವ್ ಬ್ಯಾಂಕ್ ನಿಯಮಿತ, ಬಸವನಗುಡಿ, ಬೆಂಗಳೂರು) ಶ್ರೀ ಸೈಯದ್ ವಜೀರ್ ಅಹಮದ್, ಅಧೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ನರಗುಂದ, ಗದಗ ಜಿಲ್ಲೆ ಅವರುಗಳು 13.06.2006ರಿಂದಲೇ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ವಿಶೇಷ ಕರ್ತವ್ಯ ಅಧಿಕಾರಿ ಹಾಗೂ ಆಪ್ತ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದು ಸದರಿ ಹುದ್ದೆಗಳಿಗೆ ಪ್ರತಿನಿಯೋಜನೆ ಮೇಲೆ ನೇಮಕ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 26 ಕೆಓಎಲ್ 2006, ಬೆಂಗಳೂರು, ದಿನಾಂಕ:22ನೇ ಜುಲೈ, 2006**

ಸರ್ಕಾರವು ಶ್ರೀ ಎಸ್.ಎ. ಅಂಗಡಿ, ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ಸಹಕಾರ ಇಲಾಖೆ ಅವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ವಿಶೇಷ ಕರ್ತವ್ಯ ಅಧಿಕಾರಿಯಾಗಿ 13.06.2006 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸುತ್ತದೆ.

ಶ್ರೀ ಸೈಯದ್ ವಜೀರ್ ಅಹಮದ್, ಅಧೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ನರಗುಂದ, ಗದಗ ಜಿಲ್ಲೆ ಅವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಸಹಾಯಕರಾಗಿ 13.06.2006ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1141

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಸುರಪುರ, ಮೀನುಗಾರಿಕೆ ಇಲಾಖೆ, ಇವರ ವಿರುದ್ದದ ಕರ್ನಾಟಕ ಲೋಕಾಯುಕ್ತದ ಟ್ರ್ಯಾಪ್ ಪ್ರಕರಣದ ಆರೋಪದ ಬಗ್ಗೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತು ಹಾಗೂ ಈ ಸಂಬಂಧಿತ ಸಕ್ಷಮ ನ್ಯಾಯಾಲಯದಲ್ಲಿ ಇವರ ವಿರುದ್ಧ ಹೂಡಲಾಗಿದ್ದ ಕ್ರಿಮಿನಲ್ ಮೊಕದ್ದಮೆಯಲ್ಲಿ ನೀಡಿದ ತೀರ್ಪಿನನ್ವಯ ಶಿಕ್ಷೆಗೆ ಒಳಗಾಗಿರುವ ಬಗ್ಗೆ ದಂಡನಾ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** (1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:LOK/INV(G)/L-26/Cr.4/2000 BJP ದಿನಾಂಕ:25.11.2000.

(2) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ/ 120/ ಮೀಇಸೇ/ 2000, ದಿನಾಂಕ:25.06.2001 ಮತ್ತು 31.12.2002ರ ಆದೇಶ.

(3) ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರ ಆದೇಶ ಸಂಖ್ಯೆ:LOK/INQ/131/14-A/ 2002-03, ದಿನಾಂಕ:25.02.2003.

(4) ಕರ್ನಾಟಕ ಉಪ ಲೋಕಾಯುಕ್ತ, ಬೆಂಗಳೂರು ರವರ ಅ.ಸ. ಪತ್ರ ಸಂಖ್ಯೆ:LOK/ARE-3/ENQ.106/2002-03 ದಿನಾಂಕ:08.08.2005.

(5) ಸರ್ಕಾರದ ಎರಡನೇ ಕಾರಣ ಕೇಳಿದ ನೋಟೀಸ್ ಸಂಖ್ಯೆ: ಪಸಂಮೀ/ 120/ ಮೀಇಸೇ/2000 ದಿನಾಂಕ:20.09.2005.

(6) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ (ಜಿ) ಎಲ್-26/ ಸಿ.ಆರ್-4/ 2000/ ಬಿಜೆಪಿ ದಿನಾಂಕ:07.10.2005.

(7) ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಸುರಪುರ, ಇವರು ಸಲ್ಲಿಸಿರುವ ದಿನಾಂಕ:18.10.2005ರ ಲಿಖಿತ ಉತ್ತರ.

(8) ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆಡಳಿತ/ 2/ 36/ 2000-01, ದಿನಾಂಕ:21.12.2005.

(9) ಕಾರ್ಯದರ್ಶಿ ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ರವರ ಪತ್ರ ಸಂಖ್ಯೆ: ಪಿಎಸ್‌ಸಿ/ 191/ ಸಿಎನ್‌ಎಸ್/ 2005, ದಿನಾಂಕ:28.02.2006.

**ಪ್ರಸ್ತಾವನೆ:**

ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಸುರಪುರ, ಮೀನುಗಾರಿಕೆ ಇಲಾಖೆ, ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಬಿಜಾಪುರ ಈ ಹುದ್ದೆಯಲ್ಲಿ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗ, ರಾಷ್ಟ್ರೀಯ ಮೀನುಗಾರರ ಕಲ್ಯಾಣ ನಿಧಿ ಯೋಜನೆಯಡಿ ಬಡ ಮೀನುಗಾರ ಫಲಾನುಭವಿಗಳಿಗೆ ಮನೆಗಳನ್ನು ನಿರ್ಮಿಸುವ ಯೋಜನೆಗೆ ಸಂಬಂಧಿಸಿದಂತೆ ಫಲಾನುಭವಿಗಳಿಂದ ಸ್ವೀಕರಿಸಿದ ಅರ್ಜಿಗಳನ್ನು ಮೀನುಗಾರಿಕೆ ಇಲಾಖೆಯ ಮೇಲಾಧಿಕಾರಿಗಳಿಗೆ ತಮ್ಮ ಶಿಫಾರಸ್ಸಿನೊಂದಿಗೆ ಕಳುಹಿಸಲು ದೂರುದಾರರಾದ ಶ್ರೀ ಬಸವರಾಜ್ ತಂದೆ ತಮ್ಮಣ್ಣ ಕ್ಷತ್ರಿ, ಅಧ್ಯಕ್ಷರು, ಗಡಿನಾಡು ಮೀನುಗಾರಿಕೆ ಸಹಕಾರ ಸಂಘ, ಚಡಚಣ, ಇವರಿಗೆ ಅನುಕೂಲ ಮಾಡಿಕೊಡುವುದಕ್ಕಾಗಿ ಒಟ್ಟು ರೂ.5,000-00ಗಳ (ರೂಪಾಯಿ ಐದು ಸಾವಿರಗಳು ಮಾತ್ರ) ಅಕ್ರಮ ಸಂಭಾವನೆಯ ಬೇಡಿಕೆ ಇಟ್ಟು ಅದರಲ್ಲಿ ದಿನಾಂಕ:26.06.2000ರಂದು

ರೂ.2,000-00ಗಳನ್ನು (ರೂಪಾಯಿ ಎರಡು ಸಾವಿರಗಳು ಮಾತ್ರ) ಪಡೆಯುತ್ತಿದ್ದಾಗ, ಸ್ಥಳೀಯ ಲೋಕಾಯುಕ್ತ ಪೊಲೀಸರಿಂದ ಟ್ರ್ಯಾಪ್ ಮಾಡಲ್ಪಟ್ಟಿರುತ್ತಾರೆ. ಈ ಆರೋಪದ ಬಗ್ಗೆ ಸದರಿಯವರ ವಿರುದ್ಧ ಬಿಜಾಪುರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಗುನ್ನ ಸಂಖ್ಯೆ:4/2000ರಂತೆ ಲಂಚ ನಿರೋಧಕ ಕಾಯಿದೆ 1988ರ ಕಲಂ 7.13 (1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯು ದಾಖಲಾಗಿರುತ್ತದೆ. ಈ ಪ್ರಕರಣದ ತನಿಖಾಧಿಕಾರಿಗಳ ವರದಿ ಹಾಗೂ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:25.11.2000ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದ ಪ್ರಸ್ತಾವನೆ ಹಾಗೂ ಶಿಫಾರಸ್ಸಿನ ಮೇರೆಗೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ:25.06.2001ರಲ್ಲಿ ಸದರಿ ಆಪಾದಿತ ಅಧಿಕಾರಿಯ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿತ್ತು. ಅಲ್ಲದೆ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ರವರು ದಿನಾಂಕ:04.09.2002ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದ ಕರ್ನಾಟಕ ಲೋಕಾಯುಕ್ತ ಕಾಯಿದೆ ಸೆಕ್ಷನ್ 12(3)ರನ್ವಯ ಕರ್ನಾಟಕ ಲೋಕಾಯುಕ್ತರ ಶಿಫಾರಸ್ಸಿನ ಮೇರೆಗೆ ಸದರಿ ಆಪಾದಿತ ಅಧಿಕಾರಿಯ ವಿರುದ್ಧ ದೋಷಾರೋಪಣೆಯ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14-ಎ ರಡಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:31.12.2002ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತರಿಗೆ ಅಧಿಕಾರ ನೀಡಿ ಆದೇಶಿಸಲಾಗಿತ್ತು.

(2) ಮೇಲೆ ಕಂಡಿಕೆ (1)ರಲ್ಲಿ ಹೇಳಿರುವಂತೆ ದಿನಾಂಕ:25.06.2001ರ ಸರ್ಕಾರಿ ಆದೇಶದಲ್ಲಿ ನೀಡಲಾದ ಮಂಜೂರಾತಿಯ ಮೇರೆಗೆ ಸದರಿ ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ರವರ ವಿರುದ್ಧ ಲೋಕಾಯುಕ್ತ ಪೊಲೀಸರು ಸಕ್ಷಮ ನ್ಯಾಯಾಲಯದಲ್ಲಿ ದೋಷಾರೋಪ ಪಟ್ಟಿಯನ್ನು ಸಲ್ಲಿಸಿದ್ದು, ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬಿಜಾಪುರ, ಇಲ್ಲಿ ವಿಶೇಷ ಪ್ರಕರಣ ಸಂಖ್ಯೆ: 12/2001ರಲ್ಲಿ ವಿಚಾರಣೆ ನಡೆದು, ಆರೋಪಿತ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ, ದಿನಾಂಕ:11.08.2005ರ ತೀರ್ಪಿನಲ್ಲಿ ನ್ಯಾಯಾಲಯವು ಸದರಿ ಆರೋಪಿಗೆ ಲಂಚ ನಿರೋಧ ಕಾಯಿದೆ 1988ರ ಕಲಂ 7ರಡಿ ಎಸಗಿದ ಅಪರಾಧಕ್ಕಾಗಿ 2 (ಎರಡು) ವರ್ಷಗಳ ಸಾದಾ ಜೈಲುವಾಸದ ಶಿಕ್ಷೆಯನ್ನು ಮತ್ತು ರೂ.2,500-00ಗಳ ದಂಡವನ್ನು ವಿಧಿಸಿದ್ದು, ಅಪರಾಧಿಯು ಸದರಿ ದಂಡವನ್ನು ಪಾವತಿಸಲು ತಪ್ಪಿದಲ್ಲಿ, ಇನ್ನೂ 6 ತಿಂಗಳುಗಳ ಸಾದಾ ಜೈಲುವಾಸದ ಶಿಕ್ಷೆಯನ್ನು ವಿಧಿಸಿ ಆದೇಶಿಸಲಾಗಿದೆ. ಈ ಆದೇಶದ ವಿರುದ್ಧ ಆಪಾದಿತ ನೌಕರರು ಮೇಲ್ಮನವಿ ಸಲ್ಲಿಸಿರುವ ಬಗ್ಗೆ ತಮ್ಮ ಕಛೇರಿಯ ಮಾಹಿತಿಯಂತೆ ಒಳಾಡಳಿತ ಇಲಾಖೆಯಿಂದಾಗಲೀ ಅಥವಾ ಅಡ್ವೋಕೇಟ್ ಜನರಲ್ ಕಛೇರಿಯಿಂದಾಗಲೀ ಯಾವುದೇ ಪತ್ರವ್ಯವಹಾರ, ದಾಖಲೆ ಹಾಗೂ ಮಾಹಿತಿ ಇರುವುದಿಲ್ಲವೆಂದು ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ದಿನಾಂಕ:04.01.2006ರ ಪತ್ರದಲ್ಲಿ ಸರ್ಕಾರಕ್ಕೆ ತಿಳಿಸಿರುತ್ತಾರೆ. ಆಪಾದಿತ ಅಧಿಕಾರಿಯು 2ನೆಯ ಕಾರಣ ಕೇಳುವ ಸೂಚನಾ ಪತ್ರಕ್ಕೆ ದಿನಾಂಕ:18.10.2005ರಂದು ಸಲ್ಲಿಸಿರುವ ತಮ್ಮ ಲಿಖಿತ ಉತ್ತರದಲ್ಲಿ, ಇತರ ಅಂಶಗಳನ್ನು ಪ್ರಸ್ತಾಪಿಸುವುದರೊಂದಿಗೆ ತಮ್ಮ ಮೇಲಿನ ಸದರಿ ಆಪಾದನೆಯ ಬಗ್ಗೆ ಸಿ.ಆರ್. ನಂ.1528/ 2005ರನ್ವಯ ಬಾಕಿ ಇರುವ ಕ್ರಿಮಿನಲ್ ಪ್ರೊಸೀಡಿಂಗ್ಸ್‌ಗಳ ವಸ್ತು ವಿಷಯವಾಗಿದೆಯೆಂದು ಹೇಳಿದ್ದು, ಯಾವುದೇ ವಿವರಗಳನ್ನಾಗಲೀ ಅಥವಾ ಕ್ರಿಮಿನಲ್ ಅರ್ಜಿ/ ಅಪೀಲು ಅರ್ಜಿಯ ಪ್ರತಿಯನ್ನಾಗಲೀ ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ.

(3) ಮುಂದುವರೆದು, ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:31.12.2002ರ ಸರ್ಕಾರಿ ಆದೇಶದ ಮೇರೆಗೆ ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಲೋಕಾಯುಕ್ತರ ದಿನಾಂಕ:25.02.2003ರ ಆದೇಶದಲ್ಲಿ ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾದ ಅಪರ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಇಲಾಖಾ ವಿಚಾರಣೆಯನ್ನು ಕೈಗೊಂಡು ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಮತ್ತು ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿದ ಕರ್ನಾಟಕ ಉಪ ಲೋಕಾಯುಕ್ತರು ಸದರಿ ಆಪಾದಿತ ಅಧಿಕಾರಿಯ ವಿರುದ್ಧದ ದೋಷಾರೋಪಣೆಯು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವುದು ನ್ಯಾಯಸಮ್ಮತ ಹಾಗೂ ಸೂಕ್ತವಾಗಿರುತ್ತದೆಂದು ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ದಿನಾಂಕ:08.08.2005ರ ಅರೆ ಸರ್ಕಾರಿ ಪತ್ರದಲ್ಲಿ ಶಿಫಾರಸ್ಸು ಮಾಡುತ್ತಾ, ವಿಚಾರಣಾ ವರದಿಯನ್ನು ಹಾಗೂ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿ ಹಾಗೂ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಪರಿಗಣಿಸಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಆಪಾದಿತ ಅಧಿಕಾರಿಯವರಿಗೆ ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:20.09.2005ರ 2ನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ಅವರಿಗೆ ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

(4) ಅದರಂತೆಯೇ, ಆಪಾದಿತ ಅಧಿಕಾರಿಯ ಮೇಲೆ ಹೇಳಿರುವ 2ನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಮೇಲೆ ಕ್ರಮಸಂಖ್ಯೆ (7)ರಲ್ಲಿ ಓದಲಾದ ದಿನಾಂಕ:18.10.2005ರ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಅವರು ತಮ್ಮ ಸಮಜಾಯಿಷಿಯಲ್ಲಿ ಇತರ ವಿಷಯಗಳನ್ನು ಪ್ರಸ್ತಾಪಿಸುವುದರೊಂದಿಗೆ ಮುಖ್ಯವಾಗಿ ಕರ್ನಾಟಕ ಲೋಕಾಯುಕ್ತ ಕಾಯಿದೆಯಡಿ ಗ್ರೂಪ್ 'ಬಿ' ಮತ್ತು 'ಸಿ' ವೃಂದದ ನೌಕರರ ವಿರುದ್ಧ ವಿಚಾರಣೆಯನ್ನು ನಡೆಸಲು ಉಪ ಲೋಕಾಯುಕ್ತರು ಪ್ರಾಧಿಕಾರವನ್ನು ಹೊಂದಿದ್ದು, ತಮ್ಮ ವಿರುದ್ಧದ ವಿಚಾರಣೆಯನ್ನು ಲೋಕಾಯುಕ್ತರ ಸೂಚನೆಯ ಮೇರೆಗೆ ನಡೆಸಲಾಗಿದ್ದು, ಈ ರೀತಿ ಮಾಡಲು ಹಾಗೂ ತಮ್ಮನ್ನು ಟ್ರ್ಯಾಪ್‌ಗೊಳಿಸಲು ಅಥವಾ ಈ ಕುರಿತು ವಿಚಾರಣಾ ವ್ಯವಹಾರಣೆಗಳನ್ನು ಪ್ರಾರಂಭಿಸಲು ಲೋಕಾಯುಕ್ತರಿಗೆ ಪ್ರಾಧಿಕಾರ ಇರುವುದಿಲ್ಲವೆಂದು ವಾದಿಸಿದ್ದಾರೆ. ಅಲ್ಲದೆ, ಈ ಪ್ರಕರಣದ ದೂರುದಾರರು ತಮ್ಮನ್ನು ಅನಗತ್ಯವಾಗಿ ಈ ಪ್ರಕರಣದಲ್ಲಿ ಸಿಕ್ಕಿ ಹಾಕಿಸಲು ತಮ್ಮ ವಿರುದ್ಧ ದೂರು ನೀಡಿರುತ್ತಾರೆಂದು, ಅವರು ತಮಗೆ ದಿನಾಂಕ:26.06.2000ರಂದು ನೀಡಿದ ಹಣವು ಲಂಚದ ಹಣವಲ್ಲವೆಂದು, ಆದರೆ ಅದು ದೂರುದಾರರಿಗೆ ಸಂಬಂಧಿಸಿದ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯ ನವೀಕರಣದ ಮೊತ್ತವಾಗಿದೆಯೆಂದು, ಇತ್ಯಾದಿಯಾಗಿ ವಾದಿಸುತ್ತಾ ತಾವು ಇಲಾಖೆಯಲ್ಲಿ $2^1/_2$ ದಶಕಗಳ ಸ್ವಚ್ಛ ಸೇವಾ ದಾಖಲೆಯನ್ನು ಹೊಂದಿದ್ದು, ತಮ್ಮ ಮೇಲೆ ಯಾವುದೇ ಕ್ರಮವನ್ನು ಕೈಗೊಳ್ಳಬಾರದೆಂದು ಹಾಗೂ ತಮ್ಮ ವಿರುದ್ಧ ವ್ಯವಹರಣೆಗಳನ್ನು ಕೈಬಿಡಬೇಕೆಂದು ಕೇಳಿಕೊಂಡಿದ್ದಾರೆ. ಇದರ ಸಮಜಾಯಿಷಿಯನ್ನು ವಿಚಾರಣಾ ವರದಿ ಮತ್ತು ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಈ ವಾದದ ಬಗ್ಗೆ ಆದರಲ್ಲೂ, ಮುಖ್ಯವಾಗಿ ಇವರು ದೂರುದಾರರಿಂದ ಪಡೆದ ಹಣವು ಕೆರೆಗಳ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯ ನವೀಕರಣ ಮೊತ್ತವೇ ಅಥವಾ ಅಲ್ಲವೇ ಎಂಬ ಬಗ್ಗೆ ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಸಾಕ್ಷ್ಯಾದಾರಗಳೊಂದಿಗೆ ವಿವರವಾಗಿ ಚರ್ಚಿಸಿದ್ದು, ಇದು ಕೆರೆಗಳ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯ ನವೀಕರಣದ ಮೊತ್ತವಾಗಿರದೆ ದೂರುದಾರರಿಗೆ ಅನುಕೂಲ ಮಾಡಿಕೊಡುವುದಕ್ಕಾಗಿ ಅವರಿಂದ ಪಡೆಯಲಾದ ಲಂಚದ ಹಣವೆಂದು ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ. ಇದೇ ಅಭಿಪ್ರಾಯವನ್ನು ವಿಶೇಷ ನ್ಯಾಯಾಧೀಶರ ನ್ಯಾಯಾಲಯದ ದಿನಾಂಕ:11.08.2005ರ ತೀರ್ಪಿನಲ್ಲೂ ಕೂಡ ವ್ಯಕ್ತಪಡಿಸಲಾಗಿದೆ. ಆಪಾದಿತ ನೌಕರರು ತಮ್ಮ ವಾದದಲ್ಲಿ, ತಮ್ಮ ಮೇಲಿನ ಇದೇ ಆಪಾದನೆ ಮತ್ತು ಚಾರ್ಜ್ ಬಗ್ಗೆ ಸಿ.ಆರ್. ನಂ.1528/ 2005 ರಂತೆ

ಕ್ರಿಮಿನಲ್ ನಡವಳಿಗಳು ನಡೆಯುತ್ತಿದ್ದು/ ಬಾಕಿ ಇದ್ದು, ಈಗ ಮತ್ತೆ ತಮ್ಮ ವಿರುದ್ಧ ಕ್ರಮ ಕೈಗೊಳ್ಳುವುದು ನ್ಯಾಯಸಮ್ಮತವಾಗುವುದಿಲ್ಲವೆಂದು ತಮ್ಮ ಲಿಖಿತ ಸಮಜಾಯಿಷಿಯಲ್ಲಿ ವಾದಿಸಿದ್ದಾರೆ. ಆದರೆ, ಸದರಿ ಕ್ರಿಮಿನಲ್ ನಡವಳಿಗಳ ಬಗ್ಗೆ ಯಾವುದೇ ವಿವರವಾದ ಮಾಹಿತಿಯನ್ನು ಅವರು ನೀಡಿರುವುದಿಲ್ಲ. ಈ ಬಗ್ಗೆ ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ /9/ ಸೇಇವಿ/ 95 ದಿನಾಂಕ:26.06.1996ರಲ್ಲಿ ನೀಡಿರುವ ಮಾರ್ಗಸೂಚಿಯಂತೆ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾರೆಯೇ? ಅಥವಾ ಇತರೆ ವ್ಯವಹರಣೆ ಹೂಡಿದ್ದಾರೆಯೇ? ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆಯೇ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(i) ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲವೆಂದು ಮತ್ತು ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(i) ರನುಸಾರ ಶಿಸ್ತಿನ ಕ್ರಮವನ್ನು ಆಪಾದಿತ ಅಧಿಕಾರಿಯ ವಿರುದ್ಧ ಕೈಗೊಳ್ಳತಕ್ಕದ್ದೆಂದು ಸ್ಪಷ್ಟೀಕರಿಸಲಾಗಿದೆ. ಮೇಲೆ ಹೇಳಿರುವ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಸದರಿ ಆಪಾದಿತ ಅಧಿಕಾರಿಯವರಿಗೆ ದಂಡನೆ ವಿಧಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ ಕ್ರಮಸಂಖ್ಯೆ: (6)ರಲ್ಲಿ ಓದಲಾದ ದಿನಾಂಕ:07.10.2005ರ ಪತ್ರದಲ್ಲಿ ಹಾಗೂ ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ರವರು ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ:21.12.2005ರ ಪತ್ರದಲ್ಲಿ ಕೋರಿರುತ್ತಾರೆ.

(5) ಅಲ್ಲದೆ ಆಪಾದಿತ ಅಧಿಕಾರಿಯು ಸರ್ಕಾರದ ಈ ಕ್ರಮವನ್ನು ಹಾಗೂ ವಿಚಾರಣಾಧಿಕಾರಿಗಳ ವರದಿಯನ್ನು ಪ್ರಶ್ನಿಸಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8051/ 2005ರಲ್ಲಿ ಮೊಕದ್ದಮೆ ದಾಖಲಿಸಿದ್ದು, ಈ ಅರ್ಜಿಯಲ್ಲಿ ಮುಖ್ಯವಾಗಿ ಅವರು ತಮ್ಮನ್ನು ಟ್ರ್ಯಾಪ್‌ಗೊಳಿಸಲು ಹಾಗೂ ತಮ್ಮ ವಿರುದ್ಧ ಶಿಸ್ತು ಕ್ರಮವನ್ನು ಕೈಗೊಳ್ಳಲು ಲೋಕಾಯುಕ್ತರಿಗೆ ಪ್ರಾಧಿಕಾರವಿರುವುದಿಲ್ಲವೆಂದು ಪುನಃ ವಾದಿಸಿದ್ದಾರೆ. ಈ ಮೊಕದ್ದಮೆಯಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯಿಂದ ಮಧ್ಯಂತರ ಆದೇಶವಾಗಲೀ ಅಥವಾ ತಡೆಯಾಜ್ಞೆಯಾಗಲೀ ಇರುವುದಿಲ್ಲ. ಈ ಅರ್ಜಿಯನ್ನು ವಿರೋಧಿಸಿ ಹಾಗೂ ನಡವಳಿಗಳನ್ನು ಕೈಬಿಡುವಂತೆ ಕೋರಿ ಆಪಾದಿತ ಅಧಿಕಾರಿಯ ಅರ್ಜಿಯಲ್ಲಿ ಪ್ರಸ್ತಾಪಿಸಲಾದ ಅಂಶಗಳ ಬಗ್ಗೆ ವಿವರವಾದ ಕಂಡಿಕೆವಾರು ಉತ್ತರಗಳನ್ನು ಸರ್ಕಾರಿ ವಕೀಲರಿಗೆ ದಿನಾಂಕ:21.01.2006ರಂದು ಕಳುಹಿಸಲಾಗಿದೆ.

(6) ಮೇಲಿನ ಕಂಡಿಕೆಗಳಲ್ಲಿ ವಿವರಿಸಿರುವ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2),ರವರ ವಿರುದ್ಧದ ಆಪಾದನೆಯು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಹಾಗೂ ಇದೇ ಆಪಾದನೆಯ ಬಗ್ಗೆ ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬಿಜಾಪುರ, ಇಲ್ಲಿ ಹೂಡಲಾಗಿದ್ದ ವಿಶೇಷ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:12/ 2001ರಲ್ಲಿ ನ್ಯಾಯಾಲಯವು ದಿನಾಂಕ:11.08.2005ರಲ್ಲಿ ನೀಡಿದ ಆದೇಶ/ ತೀರ್ಪಿನಲ್ಲಿ ಆಪಾದಿತರು ಲಂಚ ನಿರೋಧಕ ಕಾಯಿದೆ 1988ರ ಕಲಂ 7,13 (1)(ಡಿ) ಸಹವಾಚ 13(2) ಕೆಳಗೆ ಮಾಡಿದ ಅಪರಾಧಕ್ಕಾಗಿ ಆರೋಪಿಗೆ 2 ವರ್ಷಗಳ ಸಾದಾ ಜೈಲು ವಾಸದ ಶಿಕ್ಷೆ ಮತ್ತು ರೂ.2.500-00ಗಳ ದಂಡ ವಿಧಿಸಿದ್ದು, ಸದರಿ ದಂಡವನ್ನು ಪಾವತಿಸಲು ಆಪಾದಿತ ಅಧಿಕಾರಿಯು ತಪ್ಪಿದಲ್ಲಿ ಇನ್ನೂ 6 ತಿಂಗಳುಗಳ ಸಾದಾ ಜೈಲುವಾಸದ ಶಿಕ್ಷೆಯನ್ನು ವಿಧಿಸಿರುವುದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/ 9/ ಸೇಇವಿ/ 95 ದಿನಾಂಕ:26.06.1996ರಲ್ಲಿ ನೀಡಲಾದ ಮಾರ್ಗಸೂಚಿಗಳನ್ವಯ ಸದರಿಯವರ ವಿರುದ್ಧ ಕ್ರಮ ಕೈಗೊಳ್ಳಲು ತೀರ್ಮಾನಿಸಿದೆ.

(7) ಮುಂದುವರೆದು, ಈ ವಿಷಯದ ಬಗ್ಗೆ ನಿಯಮಾನುಸಾರ ಕರ್ನಾಟಕ ಲೋಕಸೇವಾ ಆಯೋಗದೊಂದಿಗೆ ಸಮಾಲೋಚಿಸಲಾಗಿದೆ. ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಬೇಕೆಂಬ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಕ್ರಮಸಂಖ್ಯೆ (9)ರಲ್ಲಿ ಓದಲಾದ ದಿನಾಂಕ:28.02.2006ರ ಪತ್ರದಲ್ಲಿ ತನ್ನ ಸಹಮತಿಯನ್ನು ನೀಡಿರುತ್ತದೆ. ಆದರಂತೆಯೆ, ಈ ವಿಷಯದಲ್ಲಿ ಎಲ್ಲಾ ವಲಯಗಳಿಂದ ಕೂಲಂಕಷವಾಗಿ ಪರಿಶೀಲಿಸಿದ ನಂತರ ಕೆಳಕಂಡ ಆದೇಶವನ್ನು ಹೊರಡಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 120 ಮೀಇಸೇ 2000, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳ ಮೇರೆಗೆ ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಸುರಪುರ, ಮೀನುಗಾರಿಕೆ ಇಲಾಖೆ, ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಬಿಜಾಪುರ ಈ ಹುದ್ದೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದಾಗ ರಾಷ್ಟ್ರೀಯ ಮೀನುಗಾರರ ಕಲ್ಯಾಣ ನಿಧಿ ಯೋಜನೆಯಡಿ ಮನೆಗಳನ್ನು ನಿರ್ಮಿಸಲು ಅರ್ಜಿಗಳನ್ನು ತಮ್ಮ ಶಿಫಾರಸ್ಸಿನೊಂದಿಗೆ ಮೀನುಗಾರಿಕೆ ಇಲಾಖೆಯ ಮೇಲಾಧಿಕಾರಿಗಳಿಗೆ ಕಳುಹಿಸುವ ಸಂಬಂಧ ದೂರುದಾರರಾದ ಶ್ರೀ ಬಸವರಾಜ್ ತಂದೆ ತಮ್ಮಣ್ಣ ಕ್ಷತ್ರಿ, ಅಧ್ಯಕ್ಷರು, ಗಡಿನಾಡು ಮೀನುಗಾರರ ಸಹಕಾರ ಸಂಘ, ಚಡಚಣ, ಇವರಿಗೆ ಅನುಕೂಲ ಮಾಡಿಕೊಡುವುದಕ್ಕಾಗಿ ದಿನಾಂಕ:26.06.2000ರಂದು ರೂ.2,000-00ಗಳ ಅಕ್ರಮ ಸಂಭಾವನೆ/ ಲಂಚದ ಹಣವನ್ನು ಪಡೆದಿದ್ದಾರೆಂಬ ಆಪಾದನೆಯು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಹಾಗೂ ಇದೇ ಆಪಾದನೆಯ ಬಗ್ಗೆ ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬಿಜಾಪುರ, ಇಲ್ಲಿ ಕರ್ನಾಟಕ ಲೋಕಾಯುಕ್ತರಿಂದ ಹೂಡಲಾಗಿದ್ದ ವಿಶೇಷ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:12/ 2001ರಲ್ಲಿ ಸದರಿ ನ್ಯಾಯಾಲಯವು ದಿನಾಂಕ:11.08.2005ರಂದು ನೀಡಿದ ಆದೇಶ/ ತೀರ್ಪಿನಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿರವರು ಲಂಚ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ) ಸಹವಾಚ 13(2)ರಡಿ ಎಸಗಿದ ಅಪರಾಧಕ್ಕಾಗಿ 2 ವರ್ಷಗಳ ಸಾದಾ ಜೈಲುವಾಸದ ಶಿಕ್ಷೆ ಮತ್ತು ರೂ.2,500-00ಗಳ ದಂಡ ವಿಧಿಸಿದ್ದು, ಸದರಿ ದಂಡವನ್ನು ಪಾವತಿಸಲು ಸದರಿ ಆಪಾದಿತ ಅಧಿಕಾರಿಯು ತಪ್ಪಿದಲ್ಲಿ ಇನ್ನೂ 6 ತಿಂಗಳುಗಳ ಸಾದಾ ಜೈಲುವಾಸದ ಶಿಕ್ಷೆಯನ್ನು ವಿಧಿಸಿರುವುದರಿಂದ, ಆಪಾದಿತ ಅಧಿಕಾರಿಯಾದ ಶ್ರೀ ವಿ.ಎಂ. ಸೂರ್ಯವಂಶಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಸುರಪುರ, ಮೀನುಗಾರಿಕೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರನ್ವಯ ಈ ಮೂಲಕ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಪಿ.ಆರ್. 1142

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## FORESTS, ECOLOGY AND ENVIRONMENT SECRETARIAT

**Sub:** Diversion of 56.50 ha. forest land for renewal of Iron Ore Mining lease M.L.No.626 in favour of M/s Aswathnarayana Singh & Company in N.E.Block of Sandur Range in Bellary District of Karnataka.

**Read:** (1) Letter No.A5(1) MNG.CR.26/05-06, Dated:16.09.2005 of Principal Chief Conservator of Forests, Bangalore.
(2) State Government letter No.FEE 162 FFM 2005, Dated:24.01.2006.
(3) Government of India letter No.F.No.8-12/2006-FC, Dated:03.04.2006.
(4) Letter No.A5(1) MNG.CR.26/05-06, Dated:20.06.2006 of Principal Chief Conservator of Forests, Bangalore.
(5) State Government Letter No. FEE 162 FFM 2005, Dated:22.06.2006.
(6) Government of India letter No.8-12/2006-FC Dated:4th July, 2006.

**Preamble:**

The Principal Chief Conservator of Forests had sent proposal vide his letter Dated:16.09.2005 read at (1) above for diversion of forest land for mining of iron ore in favour of M/s Aswathnarayana Singh & Company in N.E. Block of Sandur Range in Bellary District subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, New Delhi vide Government letter Dated:24.01.2006 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal fo the State Government, Government of India vide its letter Dated:03.04.2006 read at (3) above has agreed in-principle subject to fulfillment of certain conditions.

In compliance of the conditions stipulated by Government of India vide its letter Dated:03.04.2006 the Principal Chief Conservator of Forests vide his letter Dated:20.06.2006 read at (4) above has sent his compliance report. This compliance report was forwarded to Government of India vide State Government letter Dated:22.06.2006 read at (5) above.

Finally Government of India vide its letter Dated:4th July 2006 read at (6) above has conveyed its general approval under Section 2 of Forest (Conservation) Act, 1980 for diversion of 56.50 ha. of forest land for mining of iron ore in favour of M/s Aswathnarayana Singh & Company in N.E. Block of Sandur Range in Bellary District subject to the fulfillment of certain conditions. Hence the order.

**Government Order No. FEE 162 FFM 2005, Bangalore, Dated:22nd July, 2006**

After examining all aspects of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord its approval for diversion of 56.50 ha. of forest land for renewal of iron ore mining lease in favour of M/s Aswathanarayan Singh & Company in N.E. Block of Sandur Range in Bellary District under section 2 of Forest (Conservation) Act, 1980 subject to the following conditions:

1. Legal status of forest land shall remain unchanged.
2. (i) Compensatory Afforestation shall be raised and maintained by the State Forest Department at the project cost.
   (ii) Fencing, protection and regeneration of the safety zone area (7.5 metres strip all along the outer boundary of the mining lease area) shall be done at the project cost. Besides this, afforestation on degraded forest land, to be selected elsewhere; measuring one and a half times the area under safety zone, shall also be done at the project cost.
   (iii) Wherever possible and Technically feasible, the User Agency shall undertake afforestation measures in the blanks within the lease area, as well as along the roads outside the lease area diverted under this approval, in consultation with the State Forest Department at the project cost.
3. The diversion under this approval shall be for a period co-terminus with the mining lease granted under MMRD act, or for twenty (20) years, whichever is earlier,
4. The User Agency shall take up planting work on the static dumps during the advance mining operation.
5. All the dumps shall be fully reclaimed by afforestation immediately after closure of the mine in the shortest possible period under supervision of the State Forest Department.
6. Any tree felling shall be done only when it is absolutely necessary, and that too under strict supervision of the State Forest Department.
7. No damage to the flora and fauna of the area shall be caused.
8. Reclamation Plan shall be strictly implemented which shall be monitored regularly by the State Forest Department.
9. It shall be ensured that no labour-camps are set up inside the in-diverted forest area.

10. The mining lease area shall be demarcated on ground using four feet high RCC pillars. With each pillar inscribed with the serial number forward and backward bearings and distance between two adjacent pillars.
11. The forestland shall not be used for any purpose other than that specified in the proposal.
12. The lessee has to pay the Net Present Value (NPV) fixed by the Government in Notification No.FEE 247 FGL. 2002 Dated:17.01.2004.
13. Allthe funds obtained as Net Present Value of diverted forestland should be deposited with Compensatory Afforestation Fund Management of Planning Authority (CAMPA).
14. The lessee shall pay usual lease rent and supervision charges as prescribed by the Government from time to time.
15. The lessee should open a firewood depot to the employees and labourers at the subsidized rates and the quantity to be prescribed by the Conservator of Forests/ Deputy Conservator of Forests concerned.
16. The lessee shall undertake the afforestation measures in the vacant area of the lease.
17. The mining company should carryout soil and water conservation measures and other necessary measures as advised by the Forest Department from time to time.
18. The lessee shall undertake to protect rigidly the leased area and forest area surrounding the area up to one Km. from the leased area.
19. The lessee shall not cut any trees without prior permission of the Forest Department and all produce of permitted felling shall be handed over to Forest Department under cover of receipt.
20. The lessee shall abide by all the conditions prescribed by Government of India and Government of Karnataka.
21. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
22. In case of violation of agreement conditions the State Government (Department of Forest, Ecology and Environment) shall have right to suspend the mining the mining activities.
23. The lessee shall reclaim the area 56.50 ha. before handing over to Forest Department.
24. Lessee has to pay extraction cost to Forest Department for felling of trees in the fresh leased area.
25. The user agency shall submit the reclamation and rehabilitation plan after in principle approval, if not submitted so with a undertaking that amount as fixed by the Forest Department/ Director, Department of Mines and Geology/ IBM shall be deposited to Forest Department on demand. Review for rehabilitation and reclamation will be carried out on 5.10, 15 & 19th year and if found un-satisfactorily then the permission granted under Forest (Conservation) Act, 1980 will be revoked by the Government of Karnataka.
26. The lessee shall deposit the compensatory afforestation amount etc., at the prevailing rate towards raising of compensatory afforestation over 4.50 ha in non-forest land twice as a penal compensatory afforestation in the degraded forestland.
27. The lessee shall take-up the planting work on both side of raod at his cost and maintain continuously till the end of lease period.
28. The road should be mettled and proper drainage should be provided.
29. The Conservator of Forests is authorized under section 82 of Karnataka Forest Act, 1963 to forfeit the land if any violation is noticed.
30. The lessee shall convert the road in to a Tarred road and maintain it at his cost till the end of lease period. Before expiry of lease period the lessee has to restore the road to its original form by removing the hand cover and planting with natural species.
31. Any other condition that the State Government or the Chief Conservator of Forests (General) Regional Office, Bangalore may impose from time to time in the interest of conservation, protection and evelopment of forests.

By Order and in the name of the Governor of Karnataka,

**S.R. VATSALA**

Under Secretary to Government,

Forests, Ecology and Environment Department.

PR-1143

**INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT**

**Sub:** Acquisition of K.T.L.'s 7.3 acres of land in Plot Nos. 26/C & 26/D of Electronics City, Hosur Road, Bangalore by the Department from KEONICS.-orders reg.

**Read:** (1) G.O. No. ITD/44/ADM/2003 Dated:5th May, 2003 and 7th May, 2003.
(2) Letter No. KSEDC/F &A/ 2006-07 Dated: 5th July, 2006. of KEONICS.
(3) U.O. Note No. FD 1765/ Exp-1/2003 Dated:06.11.2003.

**Preamble:**

M/s KEONICS had allotted totally 7.3 acres of land in Plot Nos. 26/C & 26/D in Electronics City. Bangalore to M/s Karnataka Telecom Limited (K.T.L.) for a sum of Rs.65.85 lakhs during the period 1989 and 1992 of which K.T.L. had paid Rs.32.06 lakhs. The balance amount of Rs.33.79 lakhs had not been paid to KEONICS. In addition M/s KEONICS had also given a loan of Rs. 10 lakhs to M/s K.T.L. Accordingly, the total amount due from K.T.L. to KEONICS would be as follows:

| | |
|---|---|
| Amount due towards land cost | Rs.33.79 lakhs. |
| Interest @ 18% on land cost | Rs.10.13 lakhs |
| Loan given to K.T.L. | Rs. 10.00 lakhs. |
| Interest on loan amount | Rs.13.95 lakhs. |
| **Total** | **Rs.67.87 lakhs.** |

M/s K.T.L. closed down its operations and when the matter went up to the Debts Recovery Tribunal (DRT), M/s IIIT-B approached the State Government for obtaining the land and building of K.T.L. located in Electronics City. A total sum of Rs.700 lakhs was released by the Government vide G.O. s read at (1) above to enable the IIIT-B to pay the amount to the bankers and get the land and building released. The Debts Recovery Tribunal, Bangalore on 12th May, 2003 released the seized property of K.T.L. consisting of land and building to M/s IIIT-B. The Director, IIIT-B has since then been requesting for registration of the land and building in the name of IIIT-B. M/s KEONICS which had leased the land to K.T.L. has requested for payment of its dues of Rs.67.87 lakhs or to adjust the same against the Government loan due by KEONICS to the State Government.

Since the State Government has paid Rs.700 lakhs for release of the land and building the ownership of land and building in an extent of 7.3 acres should vest with the State Government. KEONICS is willing to transfer the land in the name of the Department of I.T. & Biotechnology provided the sum or Rs.67.87 lakhs due by K.T.L. is adjusted against the loan due by KEONICS to State Government. The Finance Department has agreed to the adjustment of Rs.67.87 lakhs due by K.T.L. to KEONICS as repayment of loan and to register the K.T.L. premises in favour of Government of Karnataka for subsequent registration to M/s IIIT-B. Hence, the following order.

**Government Order No. ITD:44: ADM: 2003, Bangalore, Dated:29th July, 2006**

Government is pleased to accord permission to Director, Information Technology & Biotechnology to get 7.3 acres of land, transferred as described above from M/s KEONICS to Department of Information Technology and Biotechnology by means of a registered deed. Under the circumstances explained above there shall be not consideration whatsoever for that transfer of land from KEONICS Ltd., to the Department of Information Technology & Biotechnology.

This order issues with the concurrence of the Finance Department conveyed vide their U.O. Note read at (3) above.

By Order and in the name of the Governor of Karnataka,
**T.B. RENUKAPRASAD**
Under Secretary to Government,
Information Technology, Biotechnology
and Science & Technology Department.

PR-1144

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ರಾಜ್ಯದಲ್ಲಿರುವ ಅಲೆಮಾರಿ ಜನಾಂಗದವರಿಗೆ ಸೌಲಭ್ಯ ಹಾಗೂ ಮೀಸಲಾತಿ ಕಲ್ಪಿಸುವಲ್ಲಿ ರಾಜ್ಯ ಮತ್ತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಲಹಾ ಸಮಿತಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಅಲೆಮಾರಿ ಜನಾಂಗದವರ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರ ಮನವಿ.

2. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆರವರ ಪ್ರಸ್ತಾವನೆ ಸಂಸ್ಥೆ: ಹಿಂವನಿ/ ಸ-ವಿಘ/ ಸಿಆರ್-01/ 2005-06, ದಿನಾಂಕ:06.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಮನವಿಯಲ್ಲಿ ರಾಜ್ಯದ ಅಲೆಮಾರಿ ಜನಾಂಗದವರ ಅಭಿವೃದ್ಧಿ ಸಂಸ್ಥೆ ಬೆಂಗಳೂರು ಇಲ್ಲಿನ ಪ್ರಧಾನ ಕಾರ್ಯದರ್ಶಿಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ ಅಲೆಮಾರಿ ಜನಾಂಗದವರನ್ನು 1977 ರಿಂದ ಬ್ಯಾಕ್ ವರ್ಡ್ ಟ್ರೈಬ್ ಹಾಗೂ ಗ್ರೂಪ್-ಎ ಮತ್ತು ವರ್ಗ-1ರ ಗುಂಪುಗಳಲ್ಲಿ ಸೇರಿಸಿ ಪದನಾಮ ಬದಲಾವಣೆಯಾಗಿರುವುದರಿಂದ ಕೇಂದ್ರ ಸರ್ಕಾರದ ಆರ್ಥಿಕ ನೆರವು 1977ರಿಂದ 2005ರವರೆಗೆ ಪೂರ್ಣವಾಗಿ ಕೈತಪ್ಪಿರುವುದರಿಂದ ಕೇಂದ್ರ ಸರ್ಕಾರದ ಎಲ್ಲಾ ಯೋಜನಾ ಕಾರ್ಯಕ್ರಮಗಳನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ವಿಶೇಷಾಧಿಕಾರಿ ಹಾಗೂ ರಾಜ್ಯಮಟ್ಟದ ಸಲಹಾ ಸಮಿತಿ ರಚನೆ ಅವಶ್ಯಕವೆಂದು ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಶಿಫಾರಸ್ಸುಗಳನ್ನು ಕೇಂದ್ರ ಸರ್ಕಾರದ ಪೂರ್ಣ ಆರ್ಥಿಕ ನೆರವಿನೊಂದಿಗೆ ವಿಶೇಷ ಸಮಗ್ರ ಅಭಿವೃದ್ಧಿ ಯೋಜನಾ ಕಾರ್ಯಕ್ರಮ ಜಾರಿಗೊಳಿಸಲು ಕೂಡಲೇ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆರವರ ಪ್ರಸ್ತಾವನೆಯಲ್ಲಿ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಸರ್ಕಾರದ ಆದೇಶ ಸಂಖ್ಯೆ: ಪಿ ಅಂಡ್ ಡಿ 273 ಎಸ್‌ಡಬ್ಲ್ಯೂಎಸ್ 1958, ದಿನಾಂಕ:22.06.1959ರ ಆದೇಶದನ್ವಯ ರಾಜ್ಯ ಮಟ್ಟದ ಅಲೆಮಾರಿ ಜನಾಂಗದವರ ವಿಶೇಷಾಧಿಕಾರಿಯವರನ್ನು ಹಾಗೂ ಸಿಬ್ಬಂದಿಯೊಂದಿಗೆ ನೇಮಿಸಲಾಗಿದ್ದು, ಕೇಂದ್ರ ಸರ್ಕಾರದ ಆರ್ಥಿಕ

ನೆರವಿನೊಂದಿಗೆ ಅಲೆಮಾರಿ ಜನಾಂಗದ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿತ್ತು. ಸರ್ಕಾರದ ಆದೇಶ ಸಂಖ್ಯೆ ಪಿಹೆಚ್ಎಸ್ 6 ಎಸ್ಎಬಿ 1962, ದಿನಾಂಕ:12.09.1962ರನ್ವಯ ರಾಜ್ಯಮಟ್ಟದ ಅಲೆಮಾರಿ ಜನಾಂಗದ ಸಲಹಾ ಸಮಿತಿಯನ್ನು ರಚಿಸಿ ಕಲ್ಯಾಣ ಕಾರ್ಯಕ್ರಮಗಳನ್ನು ಪ್ರಗತಿ ಪರಿಶೀಲನೆ ಮಾಡಿ ಸರ್ಕಾರಕ್ಕೆ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಲಾಗುತ್ತಿತ್ತು. ಇದೇ ಮಾದರಿಯಲ್ಲಿ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ಸಲಹಾ ಸಮಿತಿ ಹಾಗೂ ಪ್ರಗತಿ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದ್ದು, ಇದು ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ನಿರ್ಣಯಗಳನ್ನು ಸರ್ಕಾರಕ್ಕೆ ಸಲ್ಲಿಸಲಾಗುತ್ತಿತ್ತು. ಈ ಸಮಿತಿಯ ಅವಧಿ ಮೂರು ವರ್ಷಗಳಾಗಿದ್ದು, ಅಧಿಕಾರೇತರ ಸದಸ್ಯರುಗಳಿಗೆ ದಿನಭತ್ಯೆ ಪ್ರಯಾಣ ಭತ್ಯೆ ಹಾಗೂ ಸಿಟ್ಟಿಂಗ್ ಫೀಸ್‌ಗಳನ್ನು ನಿಯಮಾನುಸಾರ ಪಡೆಯಲು ಅರ್ಹರಾಗಿದ್ದರು. ನಂತರ ಸರ್ಕಾರದ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾದ ಶ್ರೀ ಎಲ್.ಜಿ. ಹಾವನೂರ್ ರವರ ವರದಿಯನ್ವಯ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 123 ಬಿಸಿಎ 1979, ದಿನಾಂಕ:01.05.1979ರ ಆದೇಶದ ಪ್ರಕಾರ ಅಲೆಮಾರಿ ಜನಾಂಗದವರನ್ನು ಹಿಂದುಳಿದ ಬುಡಕಟ್ಟು ಎಂದು ಪದನಾಮ ಬದಲಾವಣೆಯಾದ್ದರಿಂದ ಕೇಂದ್ರ ಸರ್ಕಾರದ ಆರ್ಥಿಕ ನೆರವು ರಾಜ್ಯಕ್ಕೆ ಕೈತಪ್ಪಿದ್ದು, ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 194 ಎಸ್‌ಇಡಬ್ಲ್ಯೂ 1983, ದಿನಾಂಕ:22.10.1983ರ ಪ್ರಕಾರ ಅಲೆಮಾರಿ ಜನಾಂಗದವರ ಆರ್ಥಿಕ ಕಾರ್ಯಕ್ರಮಗಳನ್ನು ರದ್ದುಪಡಿಸಲಾಗಿರುತ್ತದೆ. ಅಲ್ಲದೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ದಿನಾಂಕ:15.02.2002ರಂದು ರಾಜ್ಯದಲ್ಲಿ ಸಭೆ ಸೇರಿ 6 ಅಂಶಗಳ ಶಿಫಾರಸ್ಸನ್ನು ಮಾಡಿ ಮಹಾರಾಷ್ಟ್ರ ಮಾದರಿಯಲ್ಲಿ ಕೇಂದ್ರ ಸರ್ಕಾರದ ಆರ್ಥಿಕ ನೆರವಿನೊಂದಿಗೆ ವಿಶೇಷ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕೆಂದು ಸೂಚಿಸಿರುವಂತೆ ರಾಜ್ಯದಲ್ಲಿ ಕಾರ್ಯಕ್ರಮ ರೂಪಿಸಿ ಜಾರಿಗೊಳಿಸಬೇಕಾಗಿರುತ್ತದೆ. ಆದ್ದರಿಂದ ರಾಜ್ಯದ ಅಲೆಮಾರಿ ಜನಾಂಗದವರ ಕಲ್ಯಾಣ ಕಾರ್ಯಕ್ರಮಗಳನ್ನು ಪ್ರಗತಿ ಪರಿಶೀಲನೆ ಮಾಡಿ, ಸರ್ಕಾರಕ್ಕೆ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡುವ ಬಗ್ಗೆ ರಾಜ್ಯ ಮತ್ತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಲಹಾ ಸಮಿತಿ ನೇಮಿಸುವುದು ಸೂಕ್ತ ಎಂಬ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 127 ಬಿಸಿಎ 2005, ಬೆಂಗಳೂರು, ದಿನಾಂಕ:5ನೇ ಜೂನ್, 2006**

ರಾಜ್ಯದಲ್ಲಿ ಅಲೆಮಾರಿ ಜನಾಂಗದವರಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಹಾಗೂ ರಾಜ್ಯ ಮಾನವ ಹಕ್ಕುಗಳ ಆಯೋಗದ ಶಿಫಾರಸ್ಸಿನನ್ವಯ, ರಾಜ್ಯದ ಅಲೆಮಾರಿ ಜನಾಂಗದವರಿಗೆ ಮೀಸಲಾತಿ ಸೌಲಭ್ಯ ಹಾಗೂ ಕೇಂದ್ರ ಸರ್ಕಾರದ ಆರ್ಥಿಕ ನೆರವಿನೊಂದಿಗೆ ಅಲೆಮಾರಿ ಜನಾಂಗದ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ರಾಜ್ಯಮಟ್ಟದ ಅಲೆಮಾರಿ ಜನಾಂಗದವರ ಸಲಹಾ ಸಮಿತಿ ರಚನೆ ಅಗತ್ಯವಿದ್ದು ಈ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿರುವ ಅಲೆಮಾರಿ ಜನಾಂಗದವರ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಮತ್ತು ರಾಜಕೀಯ ಸಮಾನ ಅವಕಾಶ ಕಲ್ಪಿಸಲು ಸಹಕಾರಿಯಾಗುವಂತೆ ರಾಜ್ಯ ಮತ್ತು ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಿದೆ.

**I. ರಾಜ್ಯ ಮಟ್ಟದ ಅಲೆಮಾರಿ ಜನಾಂಗದ ಸಲಹಾ ಸಮಿತಿ/ ಪ್ರಗತಿ ಪರಿಶೀಲನಾ ಸಮಿತಿ**

1. ಮಾನ್ಯ ಸಮಾಜ ಕಲ್ಯಾಣ ಸಚಿವರು. - ಅಧ್ಯಕ್ಷರು
2. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು. - ಉಪಾಧ್ಯಕ್ಷರು
3. ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು. - ಸದಸ್ಯರು
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ. - ಸದಸ್ಯರು
5. ಎಸ್.ರಾಮಸ್ವಾಮಿ, ಪತ್ರಕರ್ತರು ಹಾಗೂ ಕರ್ನಾಟಕ ರಾಜ್ಯ ಅಲೆಮಾರಿ ಜನಾಂಗದ ಅಭಿವೃದ್ಧಿ ಸಂಸ್ಥೆ, ಬೆಂಗಳೂರು. - ಸದಸ್ಯರು
6. ಅಧ್ಯಕ್ಷರು, ಕರ್ನಾಟಕ ಅಲೆಮಾರಿ ಜನಾಂಗದ ಒಕ್ಕೂಟ, ಬೆಂಗಳೂರು. - ಸದಸ್ಯರು
7. ಅಲೆಮಾರಿ ಜನಾಂಗದ ಶಾಸಕರು/ ವಿಧಾನ ಪರಿಷತ್ ಸದಸ್ಯರು. - ಸದಸ್ಯರು
8. ಅಲೆಮಾರಿ ಜನಾಂಗದ ಪ್ರತಿನಿಧಿಸುವ ಜಿಲ್ಲಾ ಪಂಚಾಯತ್ ಸದಸ್ಯರು. - ಸದಸ್ಯರು
9. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ. - ಸದಸ್ಯರು
10. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗೃಹ ಇಲಾಖೆ. - ಸದಸ್ಯರು
11. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. - ಸದಸ್ಯರು
12. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ. - ಸದಸ್ಯರು
13. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು. - ಸದಸ್ಯ ಕಾರ್ಯದರ್ಶಿ

**II. ಜಿಲ್ಲಾ ಮಟ್ಟದ ಅಲೆಮಾರಿ ಜನಾಂಗದವರ ಸಲಹಾ ಸಮಿತಿ/ ಪ್ರಗತಿ ಪರಿಶೀಲನಾ ಸಮಿತಿ**

1. ಜಿಲ್ಲಾಧಿಕಾರಿಯವರು. - ಅಧ್ಯಕ್ಷರು
2. ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ. - ಉಪಾಧ್ಯಕ್ಷರು
3. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ. - ಸದಸ್ಯರು
4. ಜಿಲ್ಲಾ ಮಟ್ಟದ ಅಲೆಮಾರಿ ಜನಾಂಗದ ಅಭಿವೃದ್ಧಿ ಸಂಸ್ಥೆ, ಪ್ರತಿನಿಧಿ. - ಸದಸ್ಯರು
5. ಅಲೆಮಾರಿ ಜನಾಂಗದ ಪ್ರತಿನಿಧಿಸುವ ಜಿಲ್ಲಾ ಪಂಚಾಯತ್ ಸದಸ್ಯರು. - ಸದಸ್ಯರು
6. ಜಿಲ್ಲಾ ಮಟ್ಟದ ವಿವಿಧ ಇಲಾಖೆಯ ಅಧಿಕಾರಿ. - ಸದಸ್ಯರು
7. ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಅಧಿಕಾರಿ. - ಸದಸ್ಯ ಕಾರ್ಯದರ್ಶಿ
8. ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಅಧಿಕಾರಿ. - ಸದಸ್ಯರು

**III. ತಾಲ್ಲೂಕು ಮಟ್ಟದ ಅಲೆಮಾರಿ ಜನಾಂಗದ ಸಲಹಾ ಸಮಿತಿ/ ಪ್ರಗತಿ ಪರಿಶೀಲನಾ ಸಮಿತಿ**

1. ಉಪವಿಭಾಗೀಯ ಅಸಿಸ್ಟೆಂಟ್ ಕಮೀಷನರ್ - ಅಧ್ಯಕ್ಷರು
2. ತಾಲ್ಲೂಕು ಪಂಚಾಯತ್ ಅಧ್ಯಕ್ಷರು. - ಸಹ ಅಧ್ಯಕ್ಷಕರು.
3. ಅಲೆಮಾರಿ ಜನಾಂಗದ ತಾಲ್ಲೂಕು ಜಿಲ್ಲಾ ಪಂಚಾಯತ್ ಸದಸ್ಯರು. - ಸದಸ್ಯರು
4. ವೃತ್ತ ನಿರೀಕ್ಷಕರು, ಪೊಲೀಸ್ ಇಲಾಖೆ. - ಸದಸ್ಯರು
5. ತಾಲ್ಲೂಕು ಮಟ್ಟದ ಅಲೆಮಾರಿ ಜನಾಂಗದ ಅಭಿವೃದ್ಧಿ ಸಂಸ್ಥೆ, ಅಧ್ಯಕ್ಷರು. - ಸದಸ್ಯರು
6. ತಾಲ್ಲೂಕು ಮಟ್ಟದ ವಿವಿಧ ಇಲಾಖೆಯ ಅಧಿಕಾರಿಗಳು. - ಸದಸ್ಯರು
7. ತಾಲ್ಲೂಕು ಪಂಚಾಯತ್ ಕಾರ್ಯ ನಿರ್ವಾಹಕ ಅಧೀಕಾರಿ. - ಸದಸ್ಯರು
8. ತಹಸೀಲ್ದಾರ್. -ಸದಸ್ಯರು ಕಾರ್ಯದರ್ಶಿ

ಈ ಸಮಿತಿಗಳ ಕಾಲಾವಧಿಯು ಮೂರು (3) ವರ್ಷಗಳಾಗಿದ್ದು, ಪ್ರತಿ 3 ತಿಂಗಳಿಗೊಮ್ಮೆ ಸಭೆ ಸೇರಿ ಪ್ರಗತಿ ಪರಿಶೀಲನೆ ಮಾಡಿ ಸರ್ಕಾರಕ್ಕೆ ಸೂಕ್ತ ಸಲಹೆ ನೀಡುವುದು.

ಅಧಿಕಾರೇತರ ಸದಸ್ಯರುಗಳು ಕೆಳಕಂಡಂತೆ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

1. ತಾಲ್ಲೂಕು ಮಟ್ಟದ ಸದಸ್ಯರುಗಳು ಪ್ರತಿ 3 ತಿಂಗಳಿಗೊಮ್ಮೆ ನಡೆಯುವ ಸಭೆಗೆ 8 ಸದಸ್ಯರಿಗೆ ತಲಾ 300/- ರೂ.
2. ಜಿಲ್ಲಾ ಮಟ್ಟದ ಸದಸ್ಯರಿಗೆ ಪ್ರತಿ 3 ತಿಂಗಳಿಗೊಮ್ಮೆ ನಡೆಯುವ ಸಭೆಗೆ 8 ಸದಸ್ಯರಿಗೆ ಕಲಾ 400/- ರೂ.
3. ರಾಜ್ಯ ಮಟ್ಟದ ಸದಸ್ಯರಿಗೆ ಪ್ರತಿ 3 ತಿಂಗಳಿಗೊಮ್ಮೆ ಪಡೆಯುವ ಸಭೆಗೆ 8 ಸದಸ್ಯರಿಗೆ ತಲಾ 750/- ರೂ.

ಮೇಲ್ಕಂಡ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2225-03-001-01ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದ ಸ್ವಾಮಿ**

ಪಿ.ಆರ್. 893

ಸರ್ಕಾರದ ಅಧೀನ ಕಾರ್ಯದರ್ಶಿ-II,
ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಸಿ. ರೆಡ್ಡಿ, ಇವರನ್ನು ಮುಖ್ಯಮಂತ್ರಿಗಳ ಸಲಹೆಗಾರರೊಂದಿಗೆ ಲೋಕೋಪಯೋಗಿ, ಬಂದರು ಹಾಗೂ ಇಂಧನ ಮತ್ತು ಜಲಸಂಪನ್ಮೂಲ ಸಚಿವರುಗಳಿಗೂ ಸಲಹೆಗಾರರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಆದೇಶ ಸಂಖ್ಯೆ: ಸಿಆಸುಇ 90 ಸೇಇಮು 04 ದಿನಾಂಕ:01.07.2004.
2. ಆದೇಶ ಸಂಖ್ಯೆ: ಸಿಆಸುಇ 90 ಸೇಇಮು 04, ದಿನಾಂಕ:05.10.2004.
3. ಅಧಿಸೂಚನೆ ಸಂಖ್ಯೆ: ಸಿಆಸುಇ 22 ಸೇಇಮು 2006, ದಿನಾಂಕ:13.03.2006.
4. ಆದೇಶ ಸಂಖ್ಯೆ: ಸಿಆಸುಇ 22 ಸೇಇಮು 2006 (ಭಾ), ದಿನಾಂಕ:19.04.2006.
5. ಟಿಪ್ಪಣಿ ಸಂಖ್ಯೆ: ಸಿಆಸುಇ 22 ಸೇಇಮು 2006, ದಿನಾಂಕ:05.07.2006.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ 1ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ಸಿ. ರೆಡ್ಡಿ, ಇವರನ್ನು ಹಿಂದಿನ ಲೋಕೋಪಯೋಗಿ ಮತ್ತು ಇಂಧನ ಸಚಿವರ ಸಲಹೆಗಾರರನ್ನಾಗಿ ರಾಜ್ಯ ಸಚಿವರ ಸ್ಥಾನಮಾನದೊಂದಿಗೆ ಪ್ರಸಕ್ತ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿತ್ತು. ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ಸಿ. ರೆಡ್ಡಿ, ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಶಿಸಾನೇ 2002 ದಿನಾಂಕ:17.06.2002ರಲ್ಲಿನ ಸೌಲಭ್ಯಗಳನ್ನು ಪಡೆಯಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಕೆ.ಸಿ.ರೆಡ್ಡಿ, ಇವರನ್ನು ಮುಖ್ಯಮಂತ್ರಿಯವರಿಗೆ ಸಲಹೆಗಾರರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಸಕ್ತ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಂಪುಟ ದರ್ಜೆಯ ಸ್ಥಾನಮಾನದೊಂದಿಗೆ ನೇಮಿಸಲಾಗಿದೆ. ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ಸಿ.ರೆಡ್ಡಿ, ಮುಖ್ಯಮಂತ್ರಿಯವರ ಸಲಹೆಗಾರರು ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸಾನೇ 2002 ದಿನಾಂಕ:17.06.2002ರಲ್ಲಿನ ಸೌಲಭ್ಯಗಳನ್ನು ನೀಡಲು ಸಹಮತಿ ನೀಡಿದೆ.

ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ದಿನಾಂಕ:22.06.2006ರಂದು ನಡೆದ ಸಂಪುಟ ವಿಸ್ತರಣೆಯ ಸಮಯದಲ್ಲಿ ಮುಖ್ಯಮಂತ್ರಿಯವರು ನಿರ್ವಹಿಸುತ್ತಿದ್ದ ಲೋಕೋಪಯೋಗಿ, ಬಂದರು ಮತ್ತು ಇಂಧನ ಖಾತೆಗಳನ್ನು ಸ್ವತಂತ್ರವಾಗಿ ಬೇರೆ ಮಂತ್ರಿಗಳಿಗೆ ನೀಡಲಾಗಿದೆ ಮತ್ತು ಜಲಸಂಪನ್ಮೂಲ ಖಾತೆಯನ್ನು ಸ್ವತಂತ್ರವಾಗಿ ಸಚಿವರು ಕಾರ್ಯನಿರ್ವಹಿಸುತ್ತಿರುವರೆಂದು, ಆದ್ದರಿಂದ ಶ್ರೀ ಕೆ.ಸಿ. ರೆಡ್ಡಿ ಇವರನ್ನು ಮುಖ್ಯಮಂತ್ರಿಗಳ ಸಲಹೆಗಾರರಾಗಿ ಸಂಪುಟ ದರ್ಜೆಯ ಸ್ಥಾನಮಾನದೊಂದಿಗೆ ಮುಂದುವರಿಯುವುದಲ್ಲದೆ ಲೋಕೋಪಯೋಗಿ, ಬಂದರು ಹಾಗೂ ಇಂಧನ ಖಾತೆ ಮತ್ತು ಜಲಸಂಪನ್ಮೂಲ ಇಲಾಖೆಯ ಸಚಿವರುಗಳಿಗೂ ಸಹಾ ಸಲಹೆಗಾರರಾಗಿ ನೇಮಕ ಮಾಡುವಂತೆ ಮತ್ತು ದಿನಾಂಕ:01.02.2006ರಿಂದ 15.03.2006ರವರೆಗೆ ಶ್ರೀ ಕೆ.ಸಿ. ರೆಡ್ಡಿ, ಇವರಿಗೆ ರಾಜ್ಯ ಸಚಿವರ ವೇತನವನ್ನು ಬಿಡುಗಡೆ ಮಾಡುವಂತೆ ಮತ್ತು ದಿನಾಂಕ:16.03.2006ರಿಂದ ಸಂಪುಟ ದರ್ಜೆಯ ಸಚಿವರಿಗೆ ನೀಡಲಾಗುವ ವೇತನ ಮತ್ತು ಸವಲತ್ತುಗಳನ್ನು ನೀಡುವಂತೆ ಸೂಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸೇಇಮು 2006, ಬೆಂಗಳೂರು, ದಿನಾಂಕ:26ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಕೆ.ಸಿ. ರೆಡ್ಡಿ, ಇವರನ್ನು ಮುಖ್ಯಮಂತ್ರಿಯವರ ಸಲಹೆಗಾರರಾಗಿ ಸಂಪುಟ ದರ್ಜೆಯ ಸ್ಥಾನಮಾನದಲ್ಲಿಯೇ ಮುಂದುವರಿಸಲಾಗಿದೆ ಹಾಗೂ ಲೋಕೋಪಯೋಗಿ, ಬಂದರು ಹಾಗೂ ಇಂಧನ ಸಚಿವರ ಮತ್ತು ಜಲಸಂಪನ್ಮೂಲ ಇಲಾಖೆಯ ಸಚಿವರುಗಳ ಸಲಹೆಗಾರರಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಸಕ್ತ ಸಚಿವರುಗಳ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಶ್ರೀ ಕೆ.ಸಿ. ರೆಡ್ಡಿ, ಇವರಿಗೆ ದಿನಾಂಕ:01.02.2006ರಿಂದ 15.03.2006 ರವರೆಗಿನ ವಿಸ್ತರಿಸಿದ ಅವಧಿಗೆ ರಾಜ್ಯ ಸಚಿವರ ವೇತನವನ್ನು ಬಿಡುಗಡೆ ಮಾಡುವಂತೆ ಸಹಾ ಆದೇಶಿಸಲಾಗಿದೆ.

ಶ್ರೀ ಕೆ.ಸಿ. ರೆಡ್ಡಿ, ಇವರು ಮುಖ್ಯಮಂತ್ರಿಗಳ ಸಲಹೆಗಾರರಾಗಿ ಅಧಿಕಾರ ವಹಿಸಿಕೊಂಡ ದಿನಾಂಕ:(16.03.2006) ದಿಂದ ಅನ್ವಯವಾಗುವಂತೆ ಸಂಪುಟ ದರ್ಜೆಯ ಸಚಿವರಿಗೆ ನೀಡಲಾಗುವ ವೇತನ ಮತ್ತು ಸವಲತ್ತುಗಳನ್ನು ನೀಡುವಂತೆ ಸಹಾ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1145

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).